# ಮುಹಮ್ಮದ್ ಮುಸ್ತಫ ﷺ

## ಕುಟುಂಬದ ಒಂದು ಕಿರು ಚಿತ್ರಣ

ಮೂಲ:
ಮುಹಮ್ಮದ್ ಬುಖಾರಿ ಚೆರಿಯಮುಂಡಂ
ಇಲ್ಯಾಸ್ ಇರ್ಫಾನಿ ಚೆರಿಯಮುಂಡಂ
ಕನ್ನಡಕ್ಕೆ: **ನಿಸಾರ್ ಮುಕ್ಕಚ್ಚೇರಿ**

ಪ್ರಕಾಶಕರು

**ಮುಹ್ಯಿದ್ದೀನ್ ಪಬ್ಲಿಕೇಶನ್,ಉಳ್ಳಾಲ**

**title:**

**MUHAMMED (S) KUTUMBA**

**(ONDU KIRU CHITRANA)**

**Authors : MUHAMMED BUKHARI**

**ILYAS IRFANI CHERIYAMUNDAM**

**Translation :NISAR MUKKACHERI**

**Published by : MUHYADHEEN PUBLICATION**

**Ullal, Manglore-575020**

**Mob:9845684697,8970552456**

**Edition : November 2017**

**Copies : 1000**

**Price : 25**

# ಪ್ರಾರಂಭ

بسم الله الرحمن الرحيم

الحمد لله والصلاة والسلام على رسول الله وعلى آله وصحبه اجمعين

ಅಲ್ಲಾಹನು ಪ್ರಥಮವಾಗಿ ಸೃಷ್ಟಿಸಿದ್ದು ಮುಹಮ್ಮದ್ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರ ಪ್ರಕಾಶವನ್ನಾಗಿದೆ.ನೆಬಿ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರು ಹೇಳಿದರು: "ನಾನು ಪ್ರವಾದಿಗಳಲ್ಲಿ ಪ್ರಥಮವಾಗಿ ಸೃಷ್ಟಿಸಲ್ಪಟ್ಟವನೂ ಕೊನೆಯದಾಗಿ ನಿಯೋಗಿಸಲ್ಪಟ್ಟವನು ಕೂಡಾ."(ಹದೀಸ್) ಪರಿಶುದ್ಧ ಖುರ್‌ಆನ್‌ನಲ್ಲಿ ಅಲ್ಲಾಹನು ಹೇಳುತ್ತಾನೆ: "ನಿಮ್ಮ ಬಳಿಗೆ ಮುಹಮ್ಮದ್ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರು ಬಂದರೆ ನೀವು ಅವರಲ್ಲಿ ವಿಶ್ವಾಸ ತಾಳಬೇಕು ಹಾಗೂ ಅವರಿಗೆ ಸಹಾಯ ಮಾಡಬೇಕು."(ಖುರ್‌ಆನ್)ಈ ಸೂಕ್ತವು ನೆಬಿ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರ ಮಹೊನ್ನತ ಪದವಿಯನ್ನು ಘಂಟಾಘೋಷವಾಗಿ ಸಾರುತ್ತಿದೆ.ನೆಬಿ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರನ್ನು ಪ್ರೀತಿಸದೆ ಯಾವೊಬ್ಬ ಮುಸಲ್ಮಾನನ ಈಮಾನ್ ಪರಿಪೂರ್ಣವಾಗಲಾರದು.ನೆಬಿ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರ ಮಹತ್ವಗಳನ್ನು ಹೇಳಿ ಮುಗಿಸಲೋ ಬರೆದು ಮುಗಿಸಲೋ ಸಾಧ್ಯವಿಲ್ಲ.

ಮುಸ್ಲಿಮನಾದ ವ್ಯಕ್ತಿ ಮಾದರಿಯಾಗಿ ಕಾಣಬೇಕಾದದ್ದು ನೆಬಿ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರನ್ನಾಗಿದೆ ಅವರಂತೆ ಮಾದರಿ ಯೊಗ್ಯರು ಬೇರ್‍ಯಾರು ಇಲ್ಲ. ನೆಬಿ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರು ನಾಲ್ಕಕ್ಕಿಂತಲೂ ಹೆಚ್ಚು ವಿವಾಹ ಗೈದದ್ದು ಅಲ್ಲಾಹನ ಸಂದೇಶ ಬಂದ ಬಳಿಕವೇ ಆಗಿದೆ ಇದು ಅಲ್ಲಾಹನು ನೆಬಿ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರಿಗೆ ನೀಡಿದ ಪ್ರತ್ಯೇಕತೆಯಾಗಿದೆ. ನಬಿ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರ ಕುಟುಂಬ ಹಾಗೂ ಸ್ವಹಾಬಿಗಳ ಜವಾಬ್ದಾರಿಯ ಕುರಿತು ತಿಳಿಸಲ್ಪಡುವ ಹಲವಾರು ಕೃತಿಗಳು ನಮ್ಮೆಡೆಯಲ್ಲಿದ್ದರೂ ಬರ್ಕತಿಗೆ ಬೇಕಾಗಿ ಅವರ ಶಫಾಅತ್ ಲಭಿಸಲು ಇದೊಂದು ಕಾರಣವಾಗಲೀ ಎಂಬ ಇರಾಧೆಯೊಂದಿಗೆ ಮಳಯಾಳಂನಲ್ಲಿ ಮುಹಮ್ಮದ್ ಬುಖಾರಿ ಹಾಗೂ ಇಲ್ಯಾಸ್ ಇರ್ಫಾನಿ ರವರು ರಚಿಸಿದ ಕೃತಿಯನ್ನು ಕನ್ನಡಿಕರಿಸಿರುವೆನು ಇದನ್ನು ಅಲ್ಲಾಹನು ಸ್ವೀಕರಿಸಲಿ ಎಂದು ಪ್ರಾರ್ಥಿಸುತ್ತಾ.

**–ನಿಸಾರ್ ಮುಕ್ಕಚ್ಚೇರಿ** (ಮರ್ಕಝ್ ವಿಧ್ಯಾರ್ಥಿ) 8970552456

# ಮುಹಮ್ಮದ್ ಮುಸ್ತಫ
## (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ)

**ಹೆಸರು** : ಮುಹಮ್ಮದ್ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ)

**ತಂದೆ** : ಅಬ್ದುಲ್ ಮುತ್ತಲಿಬರ ಮಗನಾದ ಅಬ್ದುಲ್ಲಾ

**ತಾಯಿ** : ವಹಬಿನ ಮಗಳಾದ ಆಮಿನಾ ಬೀವಿ

**ಜನ್ಮ ಸ್ಥಳ** : ಅಬೂತ್ವಾಲಿಬರ ಮನೆ,ಸ್ವಫಾ ಪರ್ವತದ ಸಮೀಪ, ಮಕ್ಕತ್ತುಲ್ ಮುಕರ್ರಮ
(ಈ ಸ್ಥಳದಲ್ಲಿ ಈಗ ಮಕ್ಕಾ ಲೈಬ್ರರಿ ಕಾರ್ಯಾಚರಿಸುತ್ತಿದೆ.)

**ಜನನ ಸಮಯ**:ಸುಬಹಿಗಿಂತ ಸ್ವಲ್ಪ ಮುಂಚೆ,ಸೋಮವಾರ ರಬೀವುಲ್ ಅವ್ವಲ್ ಹನ್ನೆರಡು.ಹಿಜಿರಾದ 53 ವರ್ಷ ಮುಂಚೆ (ಕ್ರಿ.ಶ.570 ಏಪ್ರಿಲ್)

**ಶುಶ್ರೂಷೆ** : ಔಫಿನ ಮಗಳು ಶೀಫಾಅ್.

**ಪರಿಚರಣೆ** : ಬರಕ (ಉಮ್ಮು ಐಮನ್)

**ಮೊಲೆಯುಣಿಸಿವರು**: 1.ಸುವೈಬತು–ಲ್–ಅಸ್ಲಮಿಯ್ಯ
(ಅಬೂಲಹಬ್ ನಿಂದ ದಾಸ ಮುಕ್ತಳಾದ ಮಹಿಳೆ)
2.ಹಲೀಮತು ಸಅದಿಯ್ಯ.

**ಶರೀರ ಪಕೃತಿ:**

**ಮುಖ** : ಬಿಳಿ ಮಿಶ್ರಿತ ಕೆಂಪು ಬಣ್ಣ

**ಕಣ್ಣು** : ಕಪ್ಪು

**ಕೂದಲು** : ಕಪ್ಪು

**ಉದ್ದ** : ತುಂಬಾ ಉದ್ದವೂ ಅಲ್ಲ,ಕುಳ್ಳರೂ ಅಲ್ಲ.

**ಪೌರತ್ವ** : ಮುಸ್ಲಿಂ,ಅರಬಿ,ಖುರೈಶಿ.

**ಪ್ರವಾದಿತ್ವ ಲಭಿಸಿದ ಸಮಯ** :ರಮಳಾನ್ 27,
ಹಿಜಿರಾಕ್ಕೆ 13 ವರ್ಷ ಮುಂಚೆ. ಕ್ರಿ.ಶ.609.

**ಪ್ರವಾದಿತ್ವದ ಗುರುತು :**

1.ಎರಡು ಭುಜದ ಎಡೆಯಲ್ಲಿ ಪ್ರವಾದಿತ್ವದ ಮುದ್ರಣ.

2.ಯಾತ್ರೆಯಲ್ಲಿ ಮೋಡಗಳು ನೆರಳು ನೀಡುತ್ತೇ.

**ವಫತಾದ ಸ್ಥಳ** : ಮದೀನತ್ತುಲ್ ಮುನವ್ವರ.

**ವಫಾತಾದ ಸಮಯ**: ರಬೀವುಲ್ ಅವ್ವಲ್–12

**ತಂದೆಯ ಪರಂಪರೆ :**

1.ಅಬ್ದುಲ್ಲಾ. 2.ಅಬ್ದುಲ್ಮುತ್ತಲಿಬ್, 3.ಹಾಶಿಂ, 4.ಅಬ್ದು ಮನಾಫ್, 5.ಖುಸಯ್ಯ್ 6.ಕಿಲಾಬ್. 7.ಮುರ್ರತ್. 8.ಕಅ್ಬ್ 9.ಲುಅಯ್ಯ್, 10.ಗ್ವಾಲಿಬ್ 11.ಫಿಹ್ರ್, 12.ಮಲಿಕ್, 13.ನಳ್ರ್ 14.ಕಿನಾನ, 15. ಖುಸೈಮ, 16.ಮುದ್ರಿಕ, 17.ಇಲ್ಯಾಸ್, 18.ಮುಳರ್, 19.ನಿಝಾರ್, 20.ಮುಅದ್, 21.ಅದ್ನಾನ್.

**ಮಾತೃ ಪರಂಪರೆ:**

1. ಆಮಿನಾ, 2.ವಹಬ್, 3.ಅಬ್ದು ಮನಾಫ್, 4.ಸುಹ್ರ, 5.ಕಿಲಾಬ್, 6.ಮುರ್ರತ್, 7.ಕಅ್ಬ್, 8.ಲುಅಯ್ಯ್, 9.ಗ್ವಾಲಿಬ್, 10.ಫಿಹ್ರ್, 11.ಮಲಿಕ್, 12.ನಳ್ರ್, 13.ಕಿನಾನ, 14.ಖುಸೈಮ,15.ಮುದ್ರಿಕ, 16.ಇಲ್ಯಾಸ್, 17.ಮುಳರ್, 18.ನಿಝಾರ್, 19.ಮುಅದ್, 20.ಅದ್ನಾನ್.

**ಪಿತೃ ಸಹೋದರರು:**

1.ಝುಬೈರ್ (ಅಬೂ ತ್ವಾಹಿರ್), 2.ಅಬೂ ತ್ವಾಲಿಬ್, 3.ಅಬ್ದು ಮನಾಫ್,4.ಅಬ್ಬಾಸ್,(ರ.ಅ) 5.ಳಿರಾರ್, 6.ಹಂಝ(ರ.ಅ) , 7.ಮುಖವ್ವಿಂ, 8.ಹಜಲ್, 9.ಹಾರಿಸ್,

10.ಅಬೂ ಲಹಬ್(ಅಬ್ದುಲ್ ಉಝ್ಝ), 11.ಗುಯ್‌ದಖ್,
12.ಖುಸಂ.

**ಪಿತೃ ಸಹೋದರಿಯರು:**

1.ಉಮ್ಮು ಹಕೀಂ,2.ಆತಿಕ,3.ಉಮೈಮ, 4.ಅರ್‌ವ,
5.ಬರ್‌ರ, 6.ಸ್ವಫಿಯ್ಯ.

**ಮಾತೃ ಸಹೋದರರು:** 1.ಅಸ್ವದ್ ಬಿನ್ ಯಗುಸ್,
2.ಅಬ್ದುಲ್ಲಾಹಿ ಬಿನ್ ಅರ್‌ಖಂ.

**ಪತ್ನಿಯರು:**

1.ಖುವೈಲಿದರ ಮಗಳು ಖದಿಜಾ(ರ.ಅ)
2.ಸಂಅ ರವರ ಮಗಳು ಸೌಧ(ರ.ಅ)
3.ಅಬೂಬಕ್ಕರ್ (ರ.ಅ)ರವರ ಮಗಳು ಆಯಿಶಾ(ರ.ಅ)
4.ಉಮರ್ (ರ.ಅ) ರವರ ಮಗಳು ಹಫ್ಸಾ(ರ.ಅ)
5.ಖುಸೈಮ ರವರ ಮಗಳು ಝೈನಬ(ರ.ಅ)
6.ಹುದೈಫ ರವರ ಮಗಳು ಉಮ್ಮು ಸಲಮ (ರ.ಅ)
7.ಜಹ್‌ಷಿನ ಮಗಳು ಝೈನಬ(ರ.ಅ)
8. ಹಾರೀಸ್ ರವರ ಮಗಳು ಜುವೈರಿಯ್ಯ(ರ.ಅ)
9.ಹುಯಯ್ಯ ರವರ ಮಗಳು ಸಫಿಯ್ಯ(ರ.ಅ)
10.ಅಬೂ ಸುಫ್ಯಾನ್ ರವರ ಮಗಳು ರಂಲ(ರ.ಅ)
11.ಹಾರಿಸ್ ರವರ ಮಗಳು ಮೈಮುನಾ(ರ.ಅ)

**ದಾಸಿಯರ ಪೈಕಿ ನೆಬಿ(ಸ.ಅ) ರವರ ಪತ್ನಿ:**

ಶಂಊನ ಮಗಳು ಮಾರಿಯತುಲ್ ಖಿಬ್‌ತ್ವಿಯ್ಯಾ(ರ.ಅ)

**ಸಂತಾನ ಪರಂಪರೆ:**

**ಗಂಡು ಮಕ್ಕಳು–**

1.ಖಾಸಿಂ(ರ.ಅ) 2.ಅಬ್ದುಲ್ಲಾ(ರ.ಅ) 3.ಇಬ್ರಾಹೀಂ(ರ.ಅ)

**ಹೆಣ್ಣು ಮಕ್ಕಳು–**

1.ಝೈನಬಾ(ರ.ಅ) 2.ರುಖಿಯ್ಯಾ(ರ.ಅ)

3.ಉಮ್ಮು ಖುಲ್ಸೂಂ(ರ.ಅ) 4.ಫಾತೀಮಾ(ರ.ಅ)

**ಮೊಮ್ಮಕ್ಕಳು:**

1.ಅಲಿ(ರ.ಅ), 2.ಅಬ್ದುಲ್ಲ(ರ.ಅ), 3.ಹಸನ್(ರ.ಅ),
4.ಹುಸೈನ್(ರ.ಅ), 5.ಮುಹ್‌ಸಿನ್(ರ.ಅ).

**ಸುಪುತ್ರಿಯರು**

1.ಉಮಾಮ(ರ.ಅ), 2. ಉಮ್ಮು ಖುಲ್ಸೂಂ(ರ.ಅ),
3.ಝೈನಬಾ(ರ.ಅ).

**ಮೊಲೆಯುಣಿಸಿದ ಬಂಧದಿಂದಿರುವ ಸಹೋದರರು:**

ಸುವೈಬತುಲ್ ಅಸ್‌ಲಮಿಯ್ಯ ರವರ ಭಾಗದಿಂದ;–
ಜಹ್‌ಶಿನ ಮಗನಾದ ಅಬ್ದುಲ್ಲಾ,
ಅಬ್ದುಲ್ ಮುತ್ತಲಿಬರ ಮಗನಾದ ಹಂಝ,
ಅಬ್ದುಲ್ ಅಸದ್ ರ ಮಗನಾದ ಅಬೂ ಸಲಮ,
ಸುಹೈಬರ ಮಗನಾದ ಮಸ್‌ರೂಹ್.

ಹಲೀಮತುಸ್ಸದಿಯ್ಯ ರವರ ಭಾಗದಿಂದ;–
ಅಬ್ದುಲ್ಲಾ, ಅನೀಸತ್(ಸಹೋದರಿ), ಹುದಫತ್ತ್(ಸಹೋದರಿ).

**ಮೊಳೆಯುಣೆಸಿದ ಬಂಧದಿಂದ ತಂದೆ:** ಹಾರೀಸ್

**ಗುಪ್ತ ಮಾಹಿತಿ ಸಂರಕ್ಷಕರು:**

ಅನಸ್ ಬಿನ್ ಮಾಲಿಕ್(ರ.ಅ),
ಹುದೈಫತು ಬಿನ್ ಯಮನ್(ರ.ಅ), ಫಾತಿಮಾ(ರ.ಅ).

**ಬರಹಗಾರರು:**

1.ಅಬೂಬಕ್ಕರ್ ಸಿದ್ಧೀಖ್(ರ.ಅ),
2.ಉಮರ್ ಬಿನ್ ಖತ್ತಾಬ್(ರ.ಅ) 3.ಉಸ್ಮಾನ್ ಬಿನ್ ಅಫ್ವಾನ್(ರ.ಅ),
4.ಅಲೀಯ್ಯ್ ಬಿನ್ ಅಬೀತ್ವಾಲಿಬ್(ರ.ಅ),5.ಝೈದ್ ಬಿನ್ ಸಾಬಿತ್(ರ.ಅ),
6.ಖಾಲಿದ್ ಬಿನ್ ವಲೀದ್(ರ.ಅ), 7.ಸಾಬಿತ್ ಬಿನ್ ಖೈಸ್(ರ.ಅ,)
8.ಖಾಲೀದ್ ಬಿನ್ ಸಈದ್ (ರ.ಅ) 9.ಝುಬೈರ್ ಬಿನ್ ಅವ್ವಾಂ(ರ.ಅ),

10.ಮುಗೀರತ್ ಬಿನ್ ಶುಅ್‌ಬ(ರ.ಅ), 11.ಮುಆವಿಯ(ರ.ಅ), 13.ಅಬ್ದುಲ್ಲಾಹಿ ಬಿನ್ ಮಸ್‌ಊದ್(ರ.ಅ), 14.ಹನ್ಝಲ ಬಿನ್ ರಬಿಅ(ರ.ಅ), 15.ಅಬ್ದುಲ್ಲಾಹಿ ಬಿನ್ ಅರ್‌ಖಂ (ರ.ಅ),16.ಅಲಾಅ್ ಬಿನ್ ಉಖ್‌ಬ(ರ.ಅ), 17.ಉಬಯ್ಯ ಬಿನ್ ಕಅ್‌ಬ್(ರ.ಅ), 18.ಆಮಿರ್(ರ.ಅ).

**ಕವಿಗಳು:**

1.ಹಸ್ಸಾನ್ ಬಿನ್ ಸಾಬಿತ್(ರ.ಅ),
2.ಕಅ್‌ಬ್ ಬಿನ್ ಝುಬೈರ್(ರ.ಅ),
3.ಅಬ್ದುಲ್ಲಾಹಿ ಬಿನ್ ರವಾಹ(ರ.ಅ)

**ಯಾತ್ರೆಯ ಸಮಯದಲ್ಲಿನ ಕವಿಗಳು:**

1.ಅಬ್ದುಲ್ಲಾಹಿ ಬಿನ್ ರವಾಹ(ರ.ಅ) 2.ಅನ್‌ಜಶ(ರ.ಅ)

**ವಿಧಿ ನಿರ್ಣಾಯಕರು (ಖಾಝಿಗಳು):**

ಅಲಿಯ್ಯ್ ಬಿನ್ ಅಬೀ ತ್ವಾಲಿಬ್(ರ.ಅ), ಮುಅದ್ (ರ.ಅ).

**ಇಮಾಮರುಗಳು:**

ಅಬೂಬಕ್ಕರ್ ಸಿದ್ದೀಖ್(ರ.ಅ), ಅಬ್ದುರ್ರಹ್ಮಾನ್ ಬಿನ್ ಔಫ್(ರ.ಅ).

**ಬಾಂಗ್ ಕೊಡುವವರು:**

1.ಬಿಲಾಲ್ ಬಿನ್ ರವಾಹ್(ರ.ಅ),
2.ಅಬ್ದುಲ್ಲಾಹಿ ಬಿನ್ ಉಮ್ಮಿಮಕ್‌ತೂಂ(ರ.ಅ),
3.ಸಅ್‌ದುಲ್ ಖುರಳ್(ರ.ಅ),4.ಅಬೂ ಮಹ್‌ದುರ(ರ.ಅ).

**ಅಂಗ ರಕ್ಷಕರು:**

1.ಝುಬೈರ್ ಬಿನ್ ಅವ್ವಾಂ(ರ.ಅ),2.ಅಬ್ಬಾದ್ ಬಿನ್ ಬಿಶ್ರ್(ರ.ಅ),
3.ಅಬೂ ಅಯ್ಯೂಬುಲ್ ಅನ್ಸಾರಿ(ರ.ಅ),
4.ಸಅ್‌ದು ಬಿನ್ ಮುಆದ್(ರ.ಅ),
5.ಮುಹಮ್ಮದ್ ಬಿನ್ ಮಸ್‌ಲಮ(ರ.ಅ),
6.ಸಅದ್ ಬಿನ್ ಅಬೀವಖ್ಖಾಸ್(ರ.ಅ),
7.ಬಿಲಾಲ್ ಬಿನ್ ರಬಾಹ್(ರ.ಅ),
8.ದಕ್ವಾನ್ ಬಿನ್ ಅಬ್ದುಲ್ ಖೈಸ್(ರ.ಅ).

**ಖಜಾನೆ ಸಂರಕ್ಷಕರು:**

1.ಅಬೂ ಉಬೈದತು ಬಿನ್ ಜರ್ರಾಹ್(ರ.ಅ),

2.ಬಿಲಾಲ್ ಬಿನ್ ರವಾಹ್(ರ.ಅ)

3.ಮುಐಖೀಬ್(ರ.ಅ)

**ಆಯುಧ ಸಂರಕ್ಷಿಸುವ ಮನೆಯ ಕಾವಲುಗಾರರು:**

1.ಮುಗೀರತ್ ಬಿನ್ ಶುಅ್‌ಬ(ರ.ಅ),2.ಅಬೂ ತ್ವಲ್‌ಹ(ರ.ಅ).

**ಸಂದೇಶ ವಾಹಕರು :** ಸಲಮತು ಬಿನ್ ಶುಅ್‌ಬ(ರ.ಅ)

**ಪಾದರಕ್ಷಾ ವಾಹಕರು :** 1.ಮುಗೀರತ್ತು ಬಿನ್ ಶುಅ್‌ಬ(ರ.ಅ),
2.ಅಬ್ದುಲ್ಲಾಹಿ ಬಿನ್ ಮಸ್ ಊದ್(ರ.ಅ).

**ಪತಾಕೆಯ ವಾಹಕರು:**

1.ಅಲಿಯ್ಯ್ ಬಿನ್ ಅಬೀ ತ್ವಾಲಿಬ್(ರ.ಅ),
2.ಝುಬೈರ್ ಬಿನ್ ಅವ್ವಾಂ(ರ.ಅ), 3.ಸಅದ್ ಬಿನ್ ಉಬಾದ(ರ.ಅ)
4.ಝ್ಯೆದ್ ಬಿನ್ ಹಾರೀಸ್(ರ.ಅ),
5.ಜಫರ್ ಬಿನ್ ಅಬೀ ತ್ವಾಲಿಬ್(ರ.ಅ),
6.ಖಾಲಿದ್ ಬಿನ್ ವಲೀದ್(ರ.ಅ). 7.ಅಬ್ದುಲ್ಲಾಹಿ ಬಿನ್ ರವಾಹ(ರ.ಅ)

**ಸೀಲ್(ಮುದ್ರೆ) ಸಂರಕ್ಷಕರು:**

ಮುಐಖೀಬ್ ಬಿನ್ ಅಬೀ ಫಾತಿಮಾ(ರ.ಅ)

**ವಾಹನಗಳು:**

**ಕುದುರೆ;–**

1.ಸಕ್‌ಬ್ (ನಬಿ(ಸ.ಅ)ರವರು ಪ್ರಥಮವಾಗಿ ಖರೀದಿಸಿದ್ದು)

2.ಮುರ್ ತಜಿಸ್(ಬಿಳಿ ಬಣ್ಣದ್ದು)

3.ಲಿಸಾರ್

(ಈಜಿಪ್ಟ್‌ನ ಮುಖೌಖಿಸ್ ರಾಜನಿಂದ ಹದ್‌ಯಯಾಗಿ ಲಭಿಸಿದ್ದು.)

4.ಸಬ್‌ಹ (ಕೆಂಪು ಮಿಶ್ರಿತ ಬಣ್ಣ)

5.ವರ್‌ದ್(ತಮೀಮುದ್ದಾರೀ(ರ.ಅ) ರವರು ಸನ್ಮಾನವಾಗಿ ನೀಡಿದ್ದು)

6.ಬಹ್‌ರ್ (ಯಮನನ ವ್ಯಾಪಾರಸ್ಥರಿಂದ ಪಡೆದದ್ದು.)

**ಕತ್ತೆ:–**

1.ಯಅ್‌ಫುರ್(ವೇಗವಾಗಿ ಹೋಗುವಂತಹ ಕತ್ತೆ. ಫರ್ವತು ಬಿನ್ ಅಮ್ರ್ ರವರಿಂದ ಲಭಿಸಿದ್ದು.)

2.ಉಫೈರ್ (ಮುಖೌಖಿಸ್ ರಾಜನು ಹದಿಯಾ ನೀಡಿದ್ದು.)

**ಕೊವರ್ ಕಅ್‌ದ** (ಕುದುರೆ ಮತ್ತು ಕತ್ತೆಯ ಸಂಭೋಗದ ಕಾರಣದಿಂದ ಉಂಟಾಗುವ ಒಂದು ಜೀವಿ–ಮ್ಯೂಲ್);–

1.ದುಲ್ ದುಲ್(ಮುಖೌಖಿಸ್ ರಾಜನು ಹದಿಯ್ಯಾ ನೀಡಿದ್ದು.)

2.ಫಿಳ್ಳತ್ತ್ (ಹುನೈನ್‌ಯುದ್ಧದಲ್ಲಿ ನಬಿ(ಸ.ಅ)ರವರು ಉಪಯೋಗಿಸಿದ್ದು. ಫರ್ವತ್ ಬಿನ್ ಅಮ್ರ್ ನೀಡಿದ್ದು.)

3. ನಜ್ಜಾಶಿ ರಾಜನು ನೀಡಿದ್ದು.

4.ದೂಮತುಲ್ ಜನ್ ದಲೀನ ಎಂಬ ಊರಿನ ಆಧಿಕಾರಿಯೊಬ್ಬರು ನೀಡಿದ್ದು.)

**ಒಂಟೆ:–**

1.ಖಸ್‌ವಾಅ್ (ನೆಬಿ(ಸ.ಅ) ರವರು ಹಿಜಿರ ಹೋದ ವಾಹನ.ಹುದೈಬಿಯ್ಯಾ ಸಂಧಿಯ ದಿವಸದಂದೂ ಮಕ್ಕಾ ವಿಜಯ ದಿವಸದಂದೂ ನೆಬಿ(ಸ.ಅ) ರವರು ಈ ಒಂಟೆಯ ಮೇಲಿದ್ದರು.)

2.ಅಳ್ ಬಾಅ್ (ಸೋಲಿಸಲು ಸಾಧ್ಯವಿಲ್ಲದ ಒಂಟೆ)

3.ಜದ್‌ಅಅ್ (ವಹ್ಯ್ ಬರುವ ಸಮಯದಲ್ಲಿ ನಬಿ(ಸ.ಅ)ರವರು ಈ ಒಂಟೆಯ ಮೇಲೆ ಕುಳಿತ್ತಿದ್ದರು.)

4.ಮುಕ್ತಸಬ್ (ಬದ್ರ್ ಯುದ್ಧದಲ್ಲಿ ಸಮರ್ರಾಜಿತ (ಗನೀಮತ್) ಸ್ವತಾಗಿ ಲಭಿಸಿದ ಅಬೂ ಜಹಲಿನ ಒಂಟೆ.)

5.ಅಥ್‌ರಾಫ್, 6.ಅಥ್ ಲಾಲ್, 7.ಝುಂಝುಂ, 8.ಬರಕತ್.

**ಆಯುಧಗಳು:–**

1.ಮಅ್ ಸೂರ್ (ತಂದೆಯಿಂದ ಅನಂತರ ಸ್ವತಾಗಿ ಲಭಿಸಿದ್ದು.)

2.ದುಲ್ಫುಖಾರ್(ಬದ್ರ್ ಯುದ್ಧದಲ್ಲಿ ಸಮರ್ರಾಜಿತ ಸ್ವತಾಗಿ ಲಭಿಸಿದ್ದು.)

3.ಅಸ್ಸಂ ಸ್ವಾಮ( ಆರಬಿಗಳೆಡೆಯಲ್ಲಿ ಪ್ರಶಸ್ತವಾದುದ್ದು.)

4.ಅಲ್ ಅಳಬ್ (ಬದ್ರ್ ನಲ್ಲಿ ಉಬಾದ (ರ.ಅ) ರವರು ನೀಡಿದ್ದು.)

5.ಅಲ್ ಮಿಖ್‌ದಂ, 6.ಅರ್ ರುಸೂಬ್ (ಇದೆರಡು ತ್ವಯ್ಯಿಲ್ ವಂಶಸ್ಥರಿಂದ ಲಭಿಸಿದ್ದು.)

**ಪಲಿಜ(ಗುರಾಣಿ):**

1.ಅಲ್ ಮುಜುರ್ (ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರಿಗೆ ಹದ್‌ಯ್ಯ ಲಭಿಸಿದ್ದು.)

2.ಅಸ್ಸಲೀಖ್, ಅಲ್ ಫತ್ಖ್.

**ಕುಂದ(ಕಂಬ):**

1. ಅಲ್ ಮುಸ್ವ್ ವಿಯ್ಯ್,

2.ಅಲ್ ಮುಸ್ನಾ ಮತ್ತು ಇನ್ನೂ ಮೂರು ಕುಂದಗಳಿದ್ದವು ಅವು ಬನೂ ಖೈನುಖಾಲ್ ವಂಶಸ್ಥರಿಂದ ಪಡೆದದ್ದು.

**ಸಣ್ಣ ಕುಂದ;–**

1.ಅಲ್ ಬೈಳಾಲ್, 2.ಅಲ್ ನಸ (ಇಥಿಯೋಪಿಯಾದ ರಾಜನಾದ ನಜ್ಜಾಶಿಯು ಝುಬೈರ್ (ರ.ಅ) ರವರಿಗೆ ನೀಡಿದ್ದು.)

3.ಅಣಬ್‌ಗ.

**ಯುದ್ಧ ವಸ್ತ್ರ;–**

1.ದಾತುಲ್ ಫುಳುಲ್ (ಬದ್ರ್ ಗೆ ಹೋದಾಗ ಸಅದ್ ಬಿನ್ ಉಬಾದ(ರ.ಅ) ರವರು ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರಿಗೆ ನೀಡಿದ್ದು.

2.ದಾತುಲ್ ಹವಾಶೀ, 3.ದಾತುಲ್ ವಿಶಾಹ್,

4.ಅಸ್ಸಲ್‌ದಿಯ್ಯ

(ಬನೂ ಖೈನುಖಾಲ್‌ನ ಯುದ್ಧ ವಸ್ತ್ರದಲ್ಲೊಂದು.ಜಾಲೂತನ್ನು ವಧಿಸುವಾಗ ದಾವೂದ್ ನೆಬಿ(ಅ.ಸ) ರವರು ಧರಿಸಿದ್ದರೆಂಬ ಅಭಿಪ್ರಾಯವಿದೆ.)

5.ಫಿಳ್ಳತ್ತ್, 6.ಅಲ್ ಖೀರ್‌ನೀಖ್.

**ಬಿಲ್ಲು;–**

1.ಅಲ್ ಬೈಳಾಅ್, 2.ಅಸ್ಸಫ್ರಾಅ್, 3.ಅರ್ ರವಹಾಲ್

4.ಅಸ್ಸವರಾಅ್,

5.ಅಲ್ ಕತೂಂ.

ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ಆಯುಧಗಳಲ್ಲಿ ಪ್ರಮುಖವಾದವುಗಳನ್ನಾಗಿದೆ ಈ ಮೇಲೆ ತಿಳಿಸಿದ್ದು.ಮೇಲೆ ತಿಳಿಸಲ್ಪಡದ ತಲವಾರುಗಳೂ,ಯುದ್ಧ ವಸ್ತ್ರಗಳೂ,ಬಿಲ್ಲು ಬಾಣಗಳೂ ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ಬಳಿ ಇದ್ದವು.

*********

## ಪ್ರವಾದಿಗಳೆಡೆಯಲ್ಲಿ ನೆಬಿ ಮುಹಮ್ಮದ್ ಮುಸ್ತಫ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ಸ್ಥಾನ:

(ಪ್ರಮುಖ ಸ್ಥಾನ)

* ಅದಂ ಸಂತತಿಯ ನೇತಾರ.
* ಉಲುಲಅಝ್ಮ್ ಗಳಲ್ಲಿ ಒಬ್ಬರು (ಹೂದ್(ಅ.ಸ), ಇಬ್ರಾಹೀಂ(ಅ.ಸ), ಮೂಸಾ(ಅ.ಸ),ಈಸಾ(ಅ.ಸ),.. ಮುಹಮ್ಮದ್ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರು ಐದನೇಯವರು.)
* ಖುರ್ಆನ್ ಪ್ರತಿಪಾದಿಸಿದ 25 ಪ್ರವಾದಿಗಳಲ್ಲಿ ಓರ್ವರು.
* ಅಲ್ಲಾಹನು ಭೂಮಿಗೆ ನೀಯೋಗಿಸಿದ 313 ಮುರ್ಸಲ್ ಗಳಲ್ಲಿ ಕೊನೆಯವರು.
* ಅಲ್ಲಾಹನು ನಿಯೋಗಿಸಿದ 124,000 ಪ್ರವಾದಿಗಳಲ್ಲ ಕೊನೆಯವರು.

# ತಿರು ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ಪತ್ನಿಯಂದಿರು

**"ನೆಬಿಯವರೇ,ನಿಶ್ಚಯವಾಗಿಯೂ ನಿಮಗಿಂತ ಮುಂಚೆಯೂ ನಾವು ಅನೇಕ ದೂತರನ್ನು ಕಳುಹಿಸಿದ್ದೇವೆ.ನಾವು ಅವರಿಗೆ ಪತ್ನಿಯರನ್ನೂ ಮಕ್ಕಳನ್ನೂ ನೀಡಿದ್ದೇವೆ."**(ಸೂರಾ;ಅರ್ರಾಅ್‌ದ್–38)

ವಿವಾಹವು ಪ್ರವಾದಿಗಳ ಚರ್ಯೆಯಾಗಿದೆ. ಒಬ್ಬಳನ್ನು ಮಾತ್ರ ವಿವಾಹ ಮಾಡಿದವರು ಅವರಲ್ಲಿದ್ದಾರೆ.

ಇಬ್ರಾಹೀಂ(ಅ.ಸ), ಯಅ್‌ಖೂಬ್(ಅ.ಸ), ದಾವೂದ್(ಅ.ಸ), ಸುಲೈಮಾನ್(ಅ.ಸ)ರಂತೆಯೂ ಒಂದಕ್ಕಿಂತಲೂ ಹೆಚ್ಚು ವಿವಾಹ ಗೈದ ಪ್ರವಾದಿಗಳು ಇದ್ದಾರೆ.ತಿರುನೆಬಿಯವರು ಅಲ್ಲಾಹನ ನೆಬಿಯೂ, ರಸೂಲರು ಆಗಿದ್ದಾರೆ. ಮಾತುಗಳಿಂದಲೂ, ಕಾರ್ಯ ಚಟುವಟಿಕೆಗಳಿಂದಲೂ,ಮೌನ ಸಮ್ಮತದಿಂದಲೂ ಅಲ್ಲಾಹನ ಶರೀಅತನ್ನು ಜನರಿಗೆ ಮುಟ್ಟಿಸಲು ಬೇಕಾಗಿ ನಿಯೋಗಿಸಲ್ಪಟ್ಟವರಾಗಿದ್ದಾರೆ.

ಆದುದರಿಂದಲೇ ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ಎಲ್ಲಾ ಕಾರ್ಯ ಚಟುವಟಿಕೆಗಳೂ ಶರೀಅತ್ ಆಗಿದೆ.

ತಿರು ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ)ರು ವಿವಿಧ ಸಂಧರ್ಭಗಳಲ್ಲೂ ಸಮಯಗಳಲ್ಲೂ ಹದಿಮೂರು ವಿವಾಹ ಗೈದಿದ್ದಾರೆ. ಅಲ್ಲಾಹುವಿನ ಅಜ್ಞೆಯಾನುಸಾರವಾಗಿದೆ ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರು ವಿವಾಹ ಗೈದಿದ್ದು. ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ಒಂದು ಸಂದರ್ಭದಲ್ಲಿ ಹೀಗೆ ಹೇಳಿದರು;

**"ಅಲ್ಲಾಹುವಿನಿಂದ ಲಭಿಸಿದ ದಿವ್ಯ ಸಂದೇಶದೊಂದಿಗೆ ಜಿಬ್‌ರೀಲ್(ಅ.ಸ) ಬಂದೆರಗದೆ ನಾನು ವಿವಾಹ ಮಾಡಿದ್ದಾಗಿಯೋ ನನ್ನ ಸಂತಾನಗಳಿಗೆ**

**ವಿವಾಹ ಮಾಡಿಕೊಡುವುದಾಗಿಯೋ ನಡೆದಿಲ್ಲ."**

"ಶರೀಅತ್ತಿನ ಪ್ರತ್ಯಕ್ಷ ಪರೋಕ್ಷ ನಿಯಮಗಳನ್ನು ಹೇಳಲು ಲಜ್ಜೆ ಉಂಟು ಮಾಡುವಹಾಗೂ ಲಜ್ಜೆ ಉಂಟು ಮಾಡದಂತಹ ಕಾರ್ಯಗಳನ್ನು ಜನರಿಗೆ ತಲುಪಿಸುವ ಸಲುವಾಗಿ ಆ ಜವಬ್ದಾರಿಯನ್ನು ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ಪತ್ನಿಯಂದಿರಿಗೆ ಅಲ್ಲಾಹನು ನೀಡಿದನು. ನೆಬಿ(ಸ.ಅ) ರು ಸ್ವಹಾಬಿಗಳೆಡೆಯಲ್ಲಿ ಮಹಿಳೆಯರ ಸ್ನಾನ, ಹೈಲ್, ನಿಫಾಸ್,ಇದ್ದಃ ಹಾಗೂ ಇನ್ನಿತರ ವಿಷಯಗಳನ್ನು ಪ್ರತಿಪಾದಿಸಲು ಲಜ್ಜಿಸುವವರಾಗಿದ್ದರು ಅದರೆ ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರ ಪತ್ನಿಯಂದಿರು ಅವುಗಳನ್ನು ಸ್ಪಷ್ಟವಾಗಿ ಸ್ವಹಾಬಿ ವನಿತೆಯರಿಗೆ ತಲುಪಿಸುತ್ತಿದ್ದರು ಆ ಒಂದು ಕಾರಣದಿಂದಲೇ ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರಿಗೆ ತನ್ನ ಪತ್ನಿಯಂದಿರಲ್ಲಿ  ಪ್ರೀತಿಯಿದ್ದದ್ದು. ಮಾತ್ರವಲ್ಲ ಅಧಿಕ ಸ್ತ್ರೀಯರನ್ನು ವಿವಾಹ ಗೈಯ್ಯುವುದರಿಂದ ಅಧಿಕ ವಿಷಯಗಳು ಜನರಿಗೆ ತಲುಪಿಸಬಹುದು ಎಂಬ ಉದ್ಧೇಶ ಮಾತ್ರವಾಗಿದೆ ಇಲ್ಲಿರುವುದು. ಬದಲಾಗಿ ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರಿಗೆ ಶಹ್ವತ್ತ್ ಇರುವುದರಿಂದಲೋ ಸಾಧರಣ ಮನುಷ್ಯನಿಗಿರುವ ಸಂಭೋಗದಂತಹ ರೀತಿಯ ಚಟುವಟಿಕೆಗಳಲ್ಲಿ ಮೋಹವಿದ್ದ ಕಾರಣದಿಂದಲೋ ಅವರು ವಿವಾಹ ಗೈದದಲ್ಲ..ನವೂದು ಬಿಲ್ಲಾಹ್...ಅದುದರಿಂದಲೇ ಸರ್ವವನ್ನೂ ಸೃಷ್ಟಿಸಿ ಪರಿಪಾಲಿಸುವ ಪರಿಪಾಲಕನಾದ ಅಲ್ಲಾಹನು ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರಿಗೆ ನಾಲ್ಕಕ್ಕಿಂತಲೂ ಮಿಕ್ಕ ಸ್ತ್ರಿಯರನ್ನು ವಿವಾಹಗೈಯುವುದನ್ನು ಅನುವದನಿಯಗೊಳಿಸಿದ್ದು" (ಅತ್ತಾರ್ 2/408)

ಹದಿಮೂರು ಪತ್ನಿಯಂದಿರಲ್ಲಿ ಇಬ್ಬರು ಪತ್ನಿಯರೊಂದಿಗೆ ಸಂಭೋಗ ನಡೆಸಿದ್ದಾಗಿಯೋ, ಸಂಪರ್ಕವಿರಿಸಿದ್ದಾಗಿಯೋ ನಡೆದಿಲ್ಲ. ಕಿಂದ್ ಗೋತ್ರಕಾರ ನುಅ್‌ಮಾನ್ ರ ಮಗಳು ಅಸ್ಮಾ(ರ.ಅ), ಕಿಲಾಬ್

ಗೋತ್ರಕಾರ ಯಝಿದಿನ ಮಗಳು ಅಂರ(ರ.ಅ) ಎಂಬವರಾಗಿದ್ದಾರೆ ಆ ಇಬ್ಬರು. ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ)ರು ಸಂಪರ್ಕವಿರಿಸಿದ್ದ ಪತ್ನಿಯಂದಿರು ಹನ್ನೊಂದಾಗಿತ್ತು. ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ಜೀವಿತಾವಧಿಯಲ್ಲೇ ಎರಡು ಪತ್ನಿಯಂದಿರು ವಫಾತಾದರು. ಅವರು ಖುವೈಲಿದ್ ರ ಮಗಳು ಬೀವಿ ಖತೀಜ(ರ.ಅ), ಖುಸೈಮ ರವರ ಮಗಳು ಝೈನಬ(ರ.ಅ) ರವರಾಗಿದ್ದಾರೆ. ಬಾಕಿ ಉಳಿದಿರುವ ಒಂಭತ್ತು ಪತ್ನಿಯಂದಿರು ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರು ವಫಾತಾಗುವ ಸಮಯದಲ್ಲಿ ಜೀವಿಸಿದ್ದರು. ಅವರು ಆಯಿಶಾ(ರ.ಅ),ಹಫ್ಸಾ (ರ.ಅ),ಸೌದ(ರ.ಅ), ಸ್ವಫಿಯ್ಯಾ(ರ.ಅ), ಮೈಮುನಾ(ರ.ಅ), ರಂಲ(ರ.ಅ),ಹಿಂದ್(ರ.ಅ), ಝೈನಬ(ರ.ಅ),ಜುವೈರಿಯ್ಯಾ(ರ.ಅ) ರವರಾಗಿದ್ದಾರೆ.

ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ಎಲ್ಲಾ ಕಷ್ಟ ಸುಖಗಳಲ್ಲೂ ಅಲ್ಲಾಹನ ರಸೂಲರೊಂದಿಗೆ ಭುಜಕ್ಕೆ ಭುಜ ಕೊಟ್ಟು ನಿಂತವರಾಗಿದ್ದಾರೆ. ಈ ತಾಯಂದಿರು

******

# (1)
# ಖತೀಜ (ರಳಿಯಲ್ಲಾಹು ಅನ್ಹಾ)

ಮಹಿಳಾ ವಿಭಾಗದಿಂದ ಪ್ರಥಮವಾಗಿ ಇಸ್ಲಾಂ ಸ್ವೀಕರಿಸಿದವರು ಖತೀಜ(ರ.ಅ)ರವರಾಗಿದ್ದಾರೆ.ದೀನಿಗೆ ಬೇಕಾಗಿ ತನ್ನ ಸರ್ವ ಸಂಪತ್ತನ್ನು ಸಮರ್ಪಿಸಿದರು. ಮುತ್ತು ರಸೂಲರು ಇತರ ಪತ್ನಿಯರಿಗಿಂತಲೂ ಶ್ರೇಷ್ಠರಾಗಿ ಖತೀಜ (ರ.ಅ) ರವರನ್ನು ಕಂಡಿದ್ದರು.ಖತೀಜ(ರ.ಅ) ರವರು ಮರಣ ಹೊಂದುವವರೆಗೂ ಬೇರೆ ವಿವಾಹ ಗೈದಿರಲಿಲ್ಲ ರಸೂಲರು. ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ಮಕ್ಕಳ ಪೈಕಿ ಇಬ್ರಾಹೀಂ (ರ.ಅ) ರವರನ್ನು ಬಿಟ್ಟರೆ ಬಾಕಿ ಉಳಿದಿರುವ ಮಕ್ಕಳನ್ನು ಖತೀಜ(ರ.ಅ) ರವರಾಗಿದ್ಧಾರೆ ಹೆತ್ತದ್ದು.

**ಹೆಸರು** : ಖತೀಜ(ರ.ಅ)

**ತಂದೆ** : ಅಸದಿನ ಮಗ ಖುವೈಲಿದ್
(ಖುವೈಲಿದ್ ಬಿನ್ ಅಸದ್ ಬಿನ್ ಅಬ್ದುಲ್ ಉಝ್ಝ ಬಿನ್ ಖುಸಯ್ಯ್‌ಬಿನ್ ಕಿಲಾಬ್)

**ತಾಯಿ** : ಸಾಯಿದರ ಮಗಳು ಫಾತಿಮ

**ಜನನ** : ಹಿಜಿರದ 68 ವರ್ಷ ಮುಂಚೆ.

**ವಿವಾಹ** : ಹಿಜಿರದ 28 ವರ್ಷ ಮುಂಚೆ,ಮಕ್ಕದಲ್ಲಿ.

**ವಿವಾಹ ಕಾರಣ:**

ಎರಡು ಸಲ ದಾಂಪತ್ಯ ಸುಖ ಅನುಭವಿಸಿ ಎರಡು ಮಕ್ಕಳ ತಾಯಿಯಾಗಿ ವಿಧವೆಯಾಗಿದ್ದರು. ಖತೀಜ(ರ.ಅ) ರವರು ಮಕ್ಕಾದ ಉನ್ನತ ಜಾತಿಯ ಮಹಿಳೆಯಾಗಿರುವುದರೊಂದಿಗೆ ವ್ಯಾಪಾರ ವ್ಯವಹಾರಗಳಲ್ಲಿ ಉನ್ನತಿ ಪಡೆದವರೂ ಆಗಿದ್ಧರು. ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರನ್ನು ಪತಿಯಾಗಿ ಸ್ವಿಕರಿಸಬೇಕೆಂಬ ಹಂಬಲ ಅವರಿಗಿತ್ತು. ಅದೇ ರೀತಿ ಅಲ್ಲಾಹನು ತಿರ್ಮಾನಿಸಿದನು.

**ಮಹರ್** : 20 ಒಂಟೆಗಳು.

**ದಾಂಪತ್ಯ** : 25 ವರ್ಷ.

**ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ)ರವರಿಂದಿರುವ ಸಂತಾನ:**

1.ಝೈನಬ(ರ.ಅ), 2.ಖಾಸಿಂ(ರ.ಅ),
3.ರುಖಿಯ್ಯ(ರ.ಅ), 4.ಉಮ್ಮು ಖುಲ್ಸೂಂ(ರ.ಅ),
5.ಫಾತಿಮ(ರ.ಅ), 6.ಅಬ್ದುಲ್ಲಾ(ರ.ಅ).

**ಮುಂಚಿನ ಗಂಡಂದಿರು** : 1.ಅಬೂ ಹಾಲ,
2.ಅತ್ತೀಕ್ ಬಿನ್ ಆಬಿದ್ ಅಲ್ ಮಖ್‌ಸುಮಿ

**ಜೀವಿಸಿದ್ದು** : 65 ವರ್ಷ.

**ಮರಣ** : ನುಬುವ್ವತ್ ನ 10 ನೇ ವರ್ಷ,ಮಕ್ಕದಲ್ಲಿ.

**ಮಖ್‌ಬರ** : ಹುಜೂನ್(ಜನತ್ತುಲ್ ಮುಅಲ್ಲ).

******

## (2)
## ಸೌದ (ರಳಿಯಲ್ಲಾಹು ಅನ್ಹಾ)

ಖತೀಜ ಬೀವಿ (ರ.ಅ) ರವರ ವಫಾತಿನ ನಂತರ ತಿರುನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರು ಪ್ರಥಮವಾಗಿ ವಿವಾಹವಾದ ಪತ್ನಿಯಾಗಿದ್ದರು, ದಾನಮಾಡುವುದರಲ್ಲಿ ನಿಪುಣರು,ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರಿಂದ 5 ಹದೀಸ್‌ಗಳನ್ನು ರಿಪೋರ್ಟ್ ಮಾಡಿದ್ದಾರೆ ಅದರಲ್ಲಿ ಒಂದು ಹದೀಸನ್ನು ಇಮಾಂಬುಖಾರಿ (ರ.ಅ)ರವರು ತನ್ನ ಸ್ವಹೀಹುಲ್ ಬುಖಾರಿಯಲ್ಲಿ ಉಲ್ಲೇಖಿಸಿದ್ದಾರೆ.

**ಹೆಸರು** : ಸೌದ(ರ.ಅ)

**ತಂದೆ** : ಖೈಸ್ ನ ಮಗ ಸಂಅಃ

**ತಾಯಿ** : ಶುಮುಸ್

**ಜನನ** : ಹಿಜಿರದ 68 ವರ್ಷ ಮುಂಚೆ,ಮಕ್ಕದಲ್ಲಿ.

**ವಿವಾಹ** : ಹಿಜಿರದ ಮೂರು ವರ್ಷ ಮುಂಚೆ,ಮಕ್ಕದಲ್ಲಿ.

**ವಿವಾಹ ಕಾರಣ:**

ತಿರು ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರಿಗೆ ಮಕ್ಕದಲ್ಲಿದ್ಧಎರಡು ಆಶ್ರಯದಾತರಾಗಿದ್ದರು. ಪಿತೃ ವರ್‍ಯರಾದ ಅಬೂ ತ್ವಾಲಿಬ್ ಹಾಗೂ ಪ್ರಿಯ ಪತ್ನಿ ಖದೀಜ (ರ.ಅ). ದಿನಗಳೆಡೆಯಲ್ಲಿ ಇಬ್ಬರು ಆಶ್ರಯದಾತರ ಮರಣವು ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರಿಗೆ ಸಹಿಸಲಾರದಷ್ಟು ನೋವು ನೀಡಿದ್ದವು. ತನ್ನ ಕುಟುಂಬದ ಪರಿಪಾಲನೆಗೆ ಒಂದು ಸಂಗಾತಿ ಅವಶ್ಯವಿತ್ತು. ಆ ಮಹಾ ಭಾಗ್ಯವು ಬೀವಿ ಸೌದ(ರ.ಅ) ರವರಿಗೆ ಲಭಿಸಿತು.

**ದಾಂಪತ್ಯ** : 14 ವರ್ಷ.

**ನೆಬಿ (ಸ.ಅ) ರವರಿಂದಿರುವ ಸಂತಾನ:** –ಇಲ್ಲ–.

**ಮುಂಚಿನ ಪತಿಯಂದಿರು** :

ಸಕ್ರನ್ ಬಿನ್ ಅಮ್ರ್

(ಇವರಿಗೆ ಐದು ಮಕ್ಕಳಿದ್ದವು.)

**ಮರಣ** : ಉಮರ್ (ರ.ಅ) ರವರ ಖಿಲಾಫತ್‌ನ ಕೊನೆಗಳಿಗೆ, ಶವ್ವಾಲ್ ತಿಂಗಳಲ್ಲಿ,ಮದೀನದಲ್ಲಿ.

*******

## (3)
## ಆಯಿಶಾ (ರಳಿಯಲ್ಲಾಹು ಅನ್ಹಾ)

ಮುತ್ತು ರಸೂಲರು ವಿವಾಹಗೈದ ಏಕ ಕನ್ಯೆ ಸ್ತ್ರೀ ಇವರು, ಮಹಾ ಬುದ್ಧಿವಂತರಾಗಿದ್ಧರು ಸ್ವಹಾಬಿಗಳಲ್ಲಿ ಅಧಿಕ ಹದೀಸ್‌ಗಳನ್ನು ರಿಪೋರ್ಟ್ ಮಾಡಿದವರ ಪೈಕಿಯೊಬ್ಬರು. ಆಯಿಶಾ(ರ.ಅ) ರವರು 2210 ಹದೀಸ್‌ಗಳನ್ನು ರಿಪೋರ್ಟ್ ಮಾಡಿದವರಾಗಿದ್ದಾರೆ.

**ಹೆಸರು** : ಆಯಿಶಾ(ರ.ಅ)

**ಸ್ಥಾನ ಹೆಸರು(ಬಿರುದು):** ಉಮ್ಮು ಅಬ್ದುಲ್ಲಾ

**ತಂದೆ** : ಅಬೂಬಕ್ಕರ್ ಸಿದ್ದೀಖ್ (ರ.ಅ)

**ತಾಯಿ** : ಝೈನಬ(ಉಮ್ಮು ರೂಮನ್)

**ಜನನ** : ಹಿಜಿರದ 9 ವರ್ಷ ಮುಂಚೆ

**ವಿವಾಹ** : ಹಿಜಿರದ ಒಂದನೇ ವರ್ಷ,ಮದೀನದಲ್ಲಿ .

**ವಿವಾಹಕ್ಕೆ ಕಾರಣ:**

ಅಬೂಬಕ್ಕರ್ ಸಿದ್ಧೀಖ್ (ರ.ಅ) ರವರು ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರೊಂದಿಗೆ ಆಗಾಧವಾದ ಸ್ನೇಹ ವಿರಿಸಿದವರಲ್ಲೊಬ್ಬರು. ಮಕ್ಕ ನಿವಾಸಿಗಳು ಅಬೂಬಕ್ಕರ್ ಸಿದ್ಧೀಖ್ (ರ.ಅ) ರವರನ್ನು ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ಸಹೋದರ ಎಂದು ಕರೆಯುತ್ತಿದ್ದರು. ಅಲ್ಲಾಹನ ಆಜ್ಞೆಯ ಮೇರೆಗೆ ತಿರು ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರು ಬೀವಿ ಆಯಿಶಾ (ರ.ಅ) ರವರನ್ನು ವಿವಾಹ ಗೈದರು.

**ಮಹರ್** : 400 ದಿರ್ ಹಂ.

**ದಾಂಪತ್ಯ** : 11 ವರ್ಷ

**ತಿರು ನೆಬಿಯವರಿಂದಿರುವ ಸಂತಾನ** : –ಇಲ್ಲ–

**ಮುಂಚಿನ ಪತಿ** :–ಇಲ್ಲ

**ಜೀವಿಸಿದ್ದು(ಜೀವನ)** : 67 ವರ್ಷ

**ಮರಣ** : ಹಿಜಿರಾ 58, ಮದೀನದಲ್ಲಿ

**ಮಖ್ಬರ** : ಜನ್ನತ್ತುಲ್ ಬಖೀಅ್.

******

# (4)

# ಹಫ್ಸಾ (ರಳಿಯಲ್ಲಾಹು ಅನ್ಹಾ)

ಬೀವಿ ಹಫ್ಸಾ(ರ.ಅ) ರವರು 60 ಹದೀಸ್‌ಗಳನ್ನು ರಿಪೋರ್ಟ್ ಮಾಡಿದ್ದಾರೆ .

**ಹೆಸರು** : ಹಫ್ಸಾ (ರ.ಅ)

**ತಂದೆ** : ಎರಡನೇ ಖಲೀಫಾ ಉಮರ್(ರ.ಅ)

**ತಾಯಿ** : ಮಳ್‌ಊನಿನ ಮಗಳು ಝೈನಬ.

**ಜನನ** : ಹಿಜಿರದ 18 ವರ್ಷ ಮುಂಚೆ,ಮಕ್ಕದಲ್ಲಿ.

**ವಿವಾಹ** :ಹಿಜಿರ 3 ನೇ ವರ್ಷ, ಮದೀನದಲ್ಲಿ .

**ದಾಂಪತ್ಯ** : 8 ವರ್ಷ.

**ವಿವಾಹಕ್ಕೆ ಕಾರಣ:**

ಉಮರ್ (ರ.ಅ) ರವರು ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ಸೈನ್ಯದಲ್ಲಿನ ಉತ್ಸುಕ ಸೈನಿಕರಾಗಿದ್ದರು. ಉಮರ್(ರ.ಅ) ರವರೊಂದಿಗೆ ಕುಟುಂಬ ಸಂಬಧವನ್ನು ಉಂಟುಮಾಡಲು ಬೇಕಾಗಿಯೂ, ಬದ್ರ್ ಯುದ್ಧದಲ್ಲಿ ವಫಾತಾದ ಹುದೈಫ ರವರ ವಿಧವೆಯಾದ ಹಫ್ಸಾ(ರ.ಅ) ರವರಿಗೆ ಆಸರೆ ನೀಡುವ ಸಲುವಾಗಿಯೂ ತಿರುನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರು ಬೀವಿ ಹಫ್ಸಾ (ರ.ಅ) ರವರನ್ನು ವಿವಾಹ ಗೈದರು.

**ಮಹರ್** : 400 ದಿರ್‌ಹಂ.

**ತಿರು ನೆಬಿಯಿಂದಿರುವ ಸಂತಾನ** : –ಇಲ್ಲ–

**ಮುಂಚಿನ ಪತಿ** : ಖುನೈಸ್ ಬಿನ್ ಹುದೈಫ.

**ಜೀವಿಸಿದ್ದು(ಜೀವನ)**: 63 ವರ್ಷ.

**ಮರಣ** : ಹಿಜಿರಾ 45,ಮದೀನದಲ್ಲಿ.

**ಮಖ್‌ಬರ** : ಜನ್ನತ್ತುಲ್ ಬಖೀಅ್.

******

## (5)

## ಝೈನಬ(ರಳಿಯಲ್ಲಾಹು ಅನ್ಹಾ)

**ಹೆಸರು** : ಝೈನಬ(ರ.ಅ)

**ಸ್ಥಾನ ಹೆಸರು(ಬಿರುದು)** : ಉಮ್ಮುಲ್ ಮಸಾಕೀನ್ (ದರಿದ್ರರ ಮಾತೆ)

**ತಂದೆ** : ಹಾರಿಸ್‌ರ ಮಗ ಖುಸೈಮ.

**ತಾಯಿ** : ಔಫಿನ ಮಗಳು ಹಿಂದ್.

**ಜನನ** : ಹಿಜಿರದ 26 ವರ್ಷ ಮುಂಚೆ,ಮಕ್ಕದಲ್ಲಿ.

**ವಿವಾಹ** : ಹಿಜಿರ 3ನೇ ವರ್ಷ,

ಶವ್ವಾಲ್ ತಿಂಗಳ ನಂತರ,ಮದೀನದಲ್ಲಿ.

**ವಿವಾಹಕ್ಕೆ ಕಾರಣ :**

ತಿರು ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರಿಗೆ ಮೊಲೆಯುಣಿಸಿದ ಸಂಬಂಧದಲ್ಲಿ ಸಹೋದರನೂ, ಉಹ್ದ್ ಯುದ್ಧದಲ್ಲಿ ವೀರ ರಕ್ತ ಸಾಕ್ಷಿಯೂ ಆದ ಅಬ್ದುಲ್ಲಾ (ರ.ಅ) ರವರ ಪತ್ನಿ ಝೈನಬ (ರ.ಅ) ರವರು ಒಳ್ಳೆಯ ಗುಣ ನಡತೆಯುಳ್ಳ ಸ್ತ್ರೀಯಾಗಿದ್ಧರು ಹಲವಾರು ವರ ನಿಶ್ಚಯವು ಬಂದರೂ ಮಹದಿ ಆದ್ಯಾವುದನ್ನೂ ಇಷ್ಟಡಲಿಲ್ಲ. ಕೊನೆಗೆ ನೆಬಿ (ಸ್ವಲ್ಲಲ್ಲಾಹು ಅಲೈಹಿವಸಲ್ಲಂ) ರವರನ್ನು ವರ ನಾಗಿ ಪಡೆಯುವ ಭಾಗ್ಯ ಲಭಿಸಿತು.

**ಮಹರ್** : 400 ದಿರ್ಹಂ.

**ದಾಂಪತ್ಯ** : 8 ತಿಂಗಳು.

**ತಿರು ನೆಬಿಯವರಿಂದಿರುವ ಸಂತಾನ** : –ಇಲ್ಲ–.

**ಮುಂಚಿನ ಪತಿ** : ಜಹ್ಶ್ ನ ಮಗ ಅಬ್ದುಲ್ಲ.

**ಮರಣ** : ಹಿಜಿರ 4ನೇ ವರ್ಷ, ರಬೀವುಲ್ ಅವ್ವಲ್, ಮದೀನದಲ್ಲಿ.

**ಮಖ್ಬರ** : ಜನ್ನತ್ತುಲ್ ಬಖೀಅ್.

********

## (6)–
## ಹಿಂದ್ (ರಳಿಯಲ್ಲಾಹು ಅನ್ಹಾ)

ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ಪತ್ನಿಯಂದಿರ ಪೈಕಿ ಆಯಿಶಾ (ರ.ಅ) ರವರ ಬಳಿಕ ತುಂಬಾ ಹದೀಸ್ ಗಳನ್ನು ಉಲ್ಲೇಖಿಸಿದ ಒಬ್ಬರಾಗಿದ್ದಾರೆ.ಇವರು 378 ಹದೀಸ್ ಗಳನ್ನು ಉಲ್ಲೇಖ ಮಾಡಿದವರಾಗಿದ್ದಾರೆ.

**ಹೆಸರು** : ಹಿಂದ್ (ರ.ಅ)

**ತಂದೆ** : ಅಬೂ ಉಮಯ್ಯ್.

**ತಾಯಿ** : ಆಮಿರ್ ರ ಮಗಳು ಆತೀಕ.

**ಜನನ** : ಹಿಜಿರದ 30ನೇ ವರ್ಷ ಮುಂಚೆ ಮಕ್ಕದಲ್ಲಿ.

**ವಿವಾಹ** : ಹಿಜಿರ 4ನೇ ವರ್ಷ,ಮದೀನದಲ್ಲಿ.

**ವಿವಾಹ ಕಾರಣ:**

ಉಹ್ದ್ ಯುದ್ಧದಲ್ಲಿ ಗಾಯಗೊಂಡು ಮರಣ ಹೊಂದಿದರು ಅಬೂ ಸಲಮ (ರ.ಅ) ನಾಲ್ಕು ಕಂದಮ್ಮಗಳನ್ನು ಹೊತ್ತುಕೊಂಡು ತನ್ನಕುಟುಂಬದವರ ಬಳಿಗೆ ಹೋಗುವುದು ಮರಣಕ್ಕೆ ಸಮಾನವಾದುದಾಗಿ ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರು ಕಂಡರು. ಈ ಸಂಧರ್ಭದಲ್ಲಾಗಿತ್ತು ತಿರು ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ)ರವರು ಹಿಂದ್ (ರ.ಅ) ರವರನ್ನುವಿವಾಹಗೈದದ್ದು.

**ದಾಂಪತ್ಯ** : 7 ವರ್ಷ.

**ನಬಿ (ಸ.ಅ) ರವರಿಂದಿರುವ ಸಂತಾನ** : –ಇಲ್ಲ–

**ಮುಂಚಿನ ಪತಿ** : ಆಬೂ ಸಲಮ (ಅಬ್ದುಲ್ಲ)

**ಜೀವಿತಾವಧಿ** : 84 ವರ್ಷ

**ಮರಣ** : ಹಿಜಿರ 61 ಶವ್ವಾಲ್,ಮದೀನದಲ್ಲಿ (ಮುಅ್‌ಮಿನ್ ಗಳ ತಾಯಿಯಂದಿರ ಪೈಕಿ ಕೊನೆಯದಾಗಿ ಮರಣ ಹೊಂದಿದವರಾಗಿದ್ದಾರೆ.)

**ಮಖ್ಬರ** : ಜನ್ನತ್ತುಲ್ ಬಖೀಅ್.

*******

# (7)

# ಝೈನಬ (ರಳಿಯಲ್ಲಾಹು ಅನ್ಹಾ)

**ಹೆಸರು** : ಝೈನಬ(ರ.ಅ)

**ತಾಯಿ** : ರಿಆಬ್ ರ ಮಗ ಜಹ್ಷ್

**ಜನನ** : ಹಿಜಿರದ 30ವರ್ಷ ಮುಂಚೆ, ಮಕ್ಕದಲ್ಲಿ.

**ವಿವಾಹ** : ಹಿಜ್‌ರ 5ನೇ ವರ್ಷ,ಮದೀನಾದಲ್ಲಿ.

**ವಿವಾಹ ಕಾರಣ :**

ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ತಂದೆಯ ಸಹೋದರಿಯ ಮಗಳಾಗಿದ್ಧರು. ಅಲ್ಲಾಹುವಿನ ಆಜ್ಞೆಯ ಮೇರೆಗೆ ಆರಬಿಗಳೆಡೆಯಲ್ಲಿ ಚಾಲ್ತಿಯಲಿದ್ದ ಅನಾಚಾರವನ್ನು ನೀಗಿಸಲು ಬೇಕಾಗಿ (ದತ್ತು ಪುತ್ರರ ಪತ್ನಿಯಂದಿರನ್ನು ವಿವಾಹ ಗೈಯಕೂಡದು. ಕಾರಣ ದತ್ತು ಪುತ್ರರು ಸ್ವಂತ ಮಕ್ಕಳ ಸ್ಥಾನದಲ್ಲಾಗಿದ್ದಾರೆ.) ನಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರು ಝೈನಬ ಬೀವಿ (ರ.ಅ) ರನ್ನು ವಿವಾಹ ಗೈದರು.

**ಮಹರ್** : 400 ದಿರ್ಹಂ

**ದಾಂಪತ್ಯ** : 6 ವರ್ಷ.

**ತಿರು ನೆಬಿಯೊಂದಿಗಿರುವ ಸಂತಾನ** : –ಇಲ್ಲ–

**ಮುಂಚಿನ ಪತಿ** : ಝೈದ್ ಬಿನ್ ಹಾರಿಸ್(ರ.ಅ).

**ಜೀವಿತಾವಧಿ** : 50 ವರ್ಷ.

**ಮರಣ** : ಹಿಜಿರ 20 ನೇ ವರ್ಷ,ಮದೀನದಲ್ಲಿ.

**ಮಖ್‌ಬರ** : ಜನ್ನತ್ತುಲ್ ಬಖೀಅ್.

********

## (8)–
## ಜುವೈರಿಯ್ಯ (ರಳಿಯಲ್ಲಾಹು ಅನ್ಹಾ)

ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರಿಂದ ಹದೀಸ್‌ಗಳನ್ನು ಉಲ್ಲೇಖಿಸಿದ್ದಾರೆ. ಆಯಿಶಾ(ರ.ಅ) ಹೇಳುತ್ತಾರೆ; ಜುವೈರಿಯ್ಯ (ರ.ಅ) ರವರ ಕಾರಣದಿಂದ ಏಳು ನೂರಕ್ಕೂ ಮಿಕ್ಕ ಜನರಿಗೆ ದಾಸತ್ವ ಮುಕ್ತಿ ಲಭಿಸಿದೆ.

**ಹೆಸರು** : ಜುವೈರಿಯ್ಯ (ರ.ಅ)

**ತಂದೆ** : ಅಬೂ ಳಿರಾರ್ ರ ಮಗ ಹಾರಿಸ್.

**ತಾಯಿ** : *****

**ಜನನ** : ಹಿಜಿರದ 16 ವರ್ಷ ಮುಂಚೆ.

**ವಿವಾಹ** :ಹಿಜಿರ 5 ನೇ ವರ್ಷ,ಬನುಲ್ ಮುಸ್‌ತ್ವಲಖ್ ಯುದ್ಧ ನಂತರ.

**ವಿವಾಹ ಕಾರಣ:**

ಬನು ಲ್ ಮುಸ್‌ತ್ವಲಖ್ ಯುದ್ಧದಲ್ಲಿ ಸೆರೆಯಿಡಿಯಲ್ಪಟ್ಟ ಜುವೈರಿಯ್ಯಾ (ರ.ಅ) ಸಾಬಿತ್ ಬಿನ್ ಖೈಸ್ ರವರ ಅಂಶ (ಗನೀಮತ್) ವಾಗಿತ್ತು. ಗೋತ್ರ ನೇತಾರನ ಮಗಳಾದ ಜುವೈರಿಯ್ಯ (ರ.ಅ) ಮುಕ್ತಿ ಕೋರಿ ನೆಬಿ(ಸ.ಅ) ರವರ ಬಳಿ ಬಂದರು. ನೆಬಿ (ಸ.ಅ) ರವರು ಅವರನ್ನು ಮುಕ್ತಿ ಗೊಳಿಸುವುದರೊಂದಿಗೆ ಅವರನ್ನು ವಿವಾಹ ಗೈದರು. ಈ ಕಾರಣದಿಂದ ಯುದ್ಧ ಕೈದಿಗಳಾಗಿ ಬಂಧಿಗಳಾಗಿದ್ದ ಸ್ವಹಾಬಿಗಳಿಗೆ ಮೋಚನೆ ಲಭಿಸುದರೊಂದಿಗೆ ಆ ಗೋತ್ರದವರೆಲ್ಲರೂ ಇಸ್ಲಾಂ ಸ್ವೀಕರಿಸಲು ಇದೊಂದು ಕಾರಣ ವಾಯಿತು.

**ಮಹರ್** : 400 ದಿರ್‌ಹಂ.

**ದಾಂಪತ್ಯ** : 6 ವರ್ಷ.

**ತಿರು ನೆಬಿಯವರಿಂದಿರುವ ಸಂತಾನ** : –ಇಲ್ಲ–.

**ಮುಂಚಿನ ಪತಿ** : ಸಫ್ವಾನನ ಮಗ ಮುಸಾಫಿಲ್.

**ಜೀವಿತಾವಧಿ** : 65 ವರ್ಷ.

**ಮರಣ** : ಹಿಜಿರ 50,ಮದೀನದಲ್ಲಿ.

**ಮಖ್ಬರ** : ಜನ್ನತ್ತುಲ್ ಬಖೀಅ್.

********

## (9)

## ಸ್ವಫಿಯ್ಯ (ರಳಿಯಲ್ಲಾಹು ಅನ್ಹಾ)

**ಹೆಸರು** : ಸ್ವಫಿಯ್ಯ(ರ.ಅ).

**ತಂದೆ** : ಅಖ್ ತಬಿನ ಮಗ ಹುಯಯ್ಯ್.

(ಮೂಸಾ ನೆಬಿ(ಅ.ಸ) ರ ಸಹೋದರ ಹಾರೂನ್ (ಅ.ಸ)ರ ಕುಟುಂಬ ಪರಂಪರೆಯವರಾಗಿದ್ದಾರೆ.)

**ತಾಯಿ** :ಶಂವಾಅ್ ರ ಮಗಳು ಬರ್ರ.

**ಜನನ** : ಹಿಜಿರಕ್ಕೆ 10 ವರ್ಷ ಮುಂಚೆ, ಖೈಬರ್‌ನಲ್ಲಿ.

**ವಿವಾಹ** : ಹಿಜಿರ 7ನೇ ವರ್ಷ,
ಖೈಬರಿನಿಂದ ತಿರುಗಿ ಬರುವಾಗ.

**ವಿವಾಹಕ್ಕೆ ಕಾರಣ:**

ಜೂದರಲ್ಲಿ ಪ್ರಮುಖರಾದ ಹುಯಯ್ಯ್ ಬಿನ್ ಅಖ್ತಾಬಿನ ಮಗಳು, ಖೈಬರ್ ಯುದ್ಧದಲ್ಲಿ ವಧಿಸಲ್ಪಟ್ಟ ಕಿನಾನ ಎಂಬ ಜೂದ ನೇತಾರರೊರ್ವರ ಪತ್ನಿಯಾಗಿದ್ದಾರೆ.ಖೈಬರ್ ಯುದ್ಧದಲ್ಲಿ ಬಂಧಿಸಲ್ಪಟ್ಟಾಗ ಅವರನ್ನು ಪಡೆದದ್ದು ದಿಹ್ಯ್ಯತ್ತುಲ್ ಕಲ್ಬಿ (ರ.ಅ) ಎಂಬ ಸ್ವಹಾಬಿಯಾಗಿದ್ದಾರೆ. ಗೋತ್ರದಲ್ಲಿ ಉನ್ನತರಾಗಿದ್ದ ತಂದೆಯೂ, ಪತಿಯೂ,ಮರಣ ಹೊಂದಿದ ಕಾರಣದಿಂದ ಬೇಸರದಿಂದಿರುವ ಅವರಿಗೆ ಏಳು ಒಂಟೆಯನ್ನು ಮುಕ್ತಿ ಆಹಾರವಾಗಿ ನೀಡಿ ಅವರನ್ನು ದಾಸತ್ವದಿಂದ ಮುಕ್ತಿಗೊಳಿಸಿದ ಬಳಿಕ ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರು ವಿವಾಹಗೈದರು.

**ಮಹರ್** : ದಾಸ್ಯತ್ವ ದಿಂದ ಮುಕ್ತಿ.

**ದಾಂಪತ್ಯ** : 4 ವರ್ಷ.

**ತಿರು ನೆಬಿಯಿಂದಿರುವ ಕುಟುಂಬ:** –ಇಲ್ಲ–

**ಮುಂಚಿನ ಪತ್ನಿಯಂದಿರು:**

ಮಿಕ್‌ಶಮ್ ರ ಮಗ ಸಲಾಂ,

ರಬೀಅ್‌ನ ಮಗ ಕಿನಾನ.(ಇಬ್ಬರೂ ಜೂದ ಕವಿಗಳಾಗಿದ್ದರು.)

**ಮರಣ** : ಹಿಜಿರ 50 ನೇ ವರ್ಷ,ಮದೀನದಲ್ಲಿ.

**ಮಖ್‌ಬರ** : ಜನ್ನತ್ತುಲ್ ಬಖೀಅ್.

********

# (10)

# ರಂಲ (ಉಮ್ಮು ಹಬೀಬ)(ರಳಿಯಲ್ಲಾಹು ಅನ್ಹಾ)

**ಹೆಸರು** : ರಂಲ (ಉಮ್ಮು ಹಬೀಬ) (ರ.ಅ)

**ತಂದೆ** : ಅಬೂ ಸುಫ್‌ಯಾನ್.

**ತಾಯಿ** : ಅಬ್ದುಲ್ ಆಸ್ವೀರ ಮಗಳು ಸ್ವಫಿಯ್ಯ..

**ಜನನ** : ಹಿಜಿರಕ್ಕೆ 30 ವರ್ಷ ಮುಂಚೆ.

**ವಿವಾಹ ಕಾರಣ :**

ಇಸ್ಲಾಮಿನ ಪ್ರಥಮ ಘಟ್ಟದಲ್ಲೇ ಇಸ್ಲಾಂ ಸ್ವೀಕರಿಸಿದವರಾಗಿದ್ದಾರೆ. ಅಬ್‌ಸಿನಿಯಾಕ್ಕೆ ಪಲಾಯನ ಗೈದವರೂ ಕೂಡಾ ಆಗಿದ್ದರು. ಅಬ್ ಸೀನಿಯಕ್ಕೆ ತಲುಪಿದಾಗ ತನ್ನ ಪತಿ ತನ್ನ ಹಳೆಯ ಧರ್ಮಕ್ಕೆ ಮತಾಂತರವಾಗಿ ಅವರು ಮರಣ ಹೊಂದಿದರು. ಆದರೆ ರಂಲ(ರ.ಅ) ರವರು ಇಸ್ಲಾಮಿನಲ್ಲಿ ಸ್ಥಿರವಾಗಿ ನಿಂತರು. ಹಬೀಬ ಎಂಬ ಕಂದಮ್ಮನನ್ನು ಸಾಕಲು ತುಂಬಾ ಕಷ್ಟಪಡಬೇಕಾಯಿತು. ರಂಲ(ರ.ಅ) ರವರ ಅವಸ್ಥೆಯನ್ನು ಅರಿತ ತಿರುನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ಅಬ್‌ಸೀನಿಯಾದ ರಾಜ ನಜ್ಜಾಶಿಯ ಬಳಿಗೆ ದೂತನನ್ನು ಕಳುಹಿಸಿ ರಂಲ(ರ.ಅ) ರವರನ್ನು ತನಗೆ ವಿವಾಹ ಮಾಡಿಕೊಡಲು ಬೇಕಾಗಿ ಕೇಳಿಕೊಂಡರು. ಅದೇ ರೀತಿ ರಾಜನು ಅಲ್ಲಿನ ಪರಿಸರದ ಮುಸ್ಲಿಂಗಳನ್ನು ಒಂದು ಸೇರಿಸಿ ವಿವಾಹ ಮಾಡಿಕೊಟ್ಟರು.

**ಮಹರ್** : 400 ದಿರ್‌ಹಂ.

**ದಾಂಪತ್ಯ** : 4 ವರ್ಷ.

**ತಿರು ನೆಬಿಯಿಂದಿರುವ ಕುಟುಂಬ** : –ಇಲ್ಲ–

**ಮುಂಚಿನ ಪತಿ** : ಜಹ್‌ಶಿನ ಮಗ ಉಬೈದುಲ್ಲಾ

(ಅಬ್ ಸೀನಿಯಾದಲ್ಲಿ ಕ್ರೈಸ್ತ ಧರ್ಮ ಸ್ವೀಕರಿಸಿ ಮರಣ ಹೊಂದಿದರು.)

**ಮರಣ** : ಹಿಜಿರ 44ನೇ ವರ್ಷ,ಮದೀನದಲ್ಲಿ.

**ಮಖ್‌ಬರ** : ಜನ್ನತ್ತುಲ್ ಬಖೀಅ್.

*******

## (11)

## ಮೈಮುನ (ರಳಿಯಲ್ಲಾಹು ಅನ್ಹಾ)

ತಿರು ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರಿಂದ 46 ಹದೀಸ್ ಗಳನ್ನು ಉಲ್ಲೇಖಿಸಿದ್ದಾರೆ.

**ಹೆಸರು** : ಮೈಮುನ (ರ.ಅ)

(ಹೆಸರು ಬರ್‍ರ ಎಂದಾಗಿತ್ತು ತಿರು ನೆಬಿ(ಸ.ಅ) ರವರಾಗಿದ್ಧರೆ ಮೈಮುನ ಎಂದು ನಾಮಕರಣ ಮಾಡಿದ್ದು.)

**ತಂದೆ** : ಹಾರಿಸ್.

**ತಾಯಿ** : ಔಫ್‌ನ ಮಗಳು ಹಿಂದ್.

**ಜನನ** :ಹಿಜಿರಕ್ಕೆ 18ವರ್ಷ ಮುಂಚೆ,ಮಕ್ಕದಲ್ಲಿ.

**ವಿವಾಹ** : ಹಿಜಿರ 7 ನೇ ವರ್ಷ,ಮಕ್ಕದಲ್ಲಿ.

ವಿವಾಹಕ್ಕೆ ಕಾರಣ :

ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ಪಿತೃ ಸಹೋದರನಾದ ಅಬ್ಬಾಸ್ (ರ.ಅ) ರವರ ಸಹೋದರಿಯಾಗಿದ್ದಾರೆ. ವಿಧವೆಯಾಗಿದ್ದ ಇವರನ್ನು ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರು ವಿವಾಹ ಗೈಯ್ಯುವುದಕ್ಕೂ ಮುಂಚೆ ಇಬ್ಬರು ವಿವಾಹ ಮಾಡಿದ್ದರು.ನೆಬಿ(ಸ.ಅ) ರವರು ಮೈಮುನಾ ಬೀವಿ(ರ.ಅ)ರವರಿಗೆ 51 ವಯಸ್ಸು ಪ್ರಾಯವಾದ ಸಮಯದಲ್ಲಾಗಿತ್ತು ಪಿತೃ ಸಹೋದರನಿಗೆ ಸಂತಸಉಂಟು ಮಾಡಲು ಬೇಕಾಗಿ ವಿವಾಹ ಗೈದದ್ದು.

**ಮಹರ್** : 500 ದಿರ್‌ಹಂ.

**ದಾಂಪತ್ಯ** : 5 ವರ್ಷ.

**ಮರಣ** : ಹಿಜಿರ 5 ನೇ ವರ್ಷ,ಮಕ್ಕದಲ್ಲಿ.

**ತಿರು ನೆಬಿಯಿಂದಿರುವ ಕುಟುಂಬ** : –ಇಲ್ಲ–

**ಮುಂಚಿನ ಪತಿಯಂದಿರು** : ಅಮ್ರ್‌ನ ಮಗ ಮಸ್‌ಊದ್, ಅಬ್ದುಲ್ ಉರ್ಝ್ಝರ ಮಗ ಅಬೂರುಹೂಂ.

**ಜೀವಿತಾವಧಿ** : 69 ವರ್ಷ.

**ಮಖ್‌ಬರ** : ಮಕ್ಕದ ಸರಿಫ್ ಎಂಬಲ್ಲಿ.

******

## ನೆಬಿ(ಸ.ಅ)ರವರು ವಿವಾಹ ಗೈದ ಏಕದಾಸಿ.

# ಮಾರಿಯತುಲ್ ಖಿಬ್ತ್ವಿಯ್ಯಾ (ರಳಿಯಲ್ಲಾಹು ಅನ್ಹಾ)

**ಹೆಸರು** : ಮಾರಿಯ(ರ.ಅ).

**ತಂದೆ** : ಶಂಳೌಲ್.

**ತಾಯಿ** : *****

**ಜನನ** : *****

**ವಿವಾಹ** : ಹಿಜಿರ 7ನೇ ವರ್ಷ, ಮದೀನದಲ್ಲಿ.

**ವಿವಾಹಕ್ಕೆ ಕಾರಣ:**

ತಿರು ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರೊಂದಿಗಿರುವ ಮಹತ್ತರವಾದ ಜೀವನದಲ್ಲಿ ದಾಸಿಗಳಿಗಿರುವ ಅರ್ಹತೆಯನ್ನು ಸ್ಥಿರ ಪಡಿಸಲು ಬೇಕಾಗಿ ಮರಿಯ (ರ.ಅ)ರನ್ನು ತಿರು ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರು ವಿವಾಹ ಗೈದದ್ದು. ಮಿಸ್ರಿನ ರಾಜನಾದ ಮುಖೌಖೀಸ್ ತಿರು ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರಿಗೆ ಹದಿಯಾವಾಗಿ ನೀಡಲ್ಪಟ್ಟ ದಾಸಿ. ಮಹದಿಯೂ ಹಾತಿ ಬಿನ್ ಅಬೀ ಬಲ್ ತಅತ್(ರ.ಅ) ಮುಖಾಂತರ ಇಸ್ಲಾಂ ಸ್ವೀಕರಿಸಿದ್ದರು.

**ದಾಂಪತ್ಯ** : 4 ವರ್ಷ.

**ಮರಣ** :ಹಿಜಿರ 16 ನೇ ವರ್ಷ,ಮದೀನದಲ್ಲಿ.

**ತಿರು ನೆಬಿಯಿಂದಿರುವ ಸಂತಾನ** : ಇಬ್ರಾಹೀಂ(ರ.ಅ).

*******



# ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ಸಂತಾನ:

ದೀರ್ಘವಾದ ಮೂವತ್ತೆಂಟು ವರ್ಷದ ದಾಂಪತ್ಯ ಜೀವನದಲ್ಲಿ ನೆಬಿ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರಿಗೆ 7 ಕಂದಮ್ಮಗಳು ಜನಿಸಿದರು. ಮೂವರು ಗಂಡು ಮಕ್ಕಳೂ, ನಾಲ್ಕು ಹೆಣ್ಣು ಮಕ್ಕಳೂ ಇದ್ದರು. ಅವರು ಖಾಸಿಂ(ರ), ಝೈನಬ(ರ.ಅ), ರುಖಿಯ್ಯ(ರ.ಅ),ಫಾತಿಮಾ(ರ.ಅ), ಉಮ್ಮು ಖುಲ್ಸೂಂ(ರ.ಅ), ಅಬ್ದುಲ್ಲಾ(ರ.ಅ), ಇಬ್ರಾಹೀ(ರ)ರವರಾಗಿದ್ಧರು. ಪ್ರಥಮ ಹಂತದಲ್ಲಿನ 6 ಮಕ್ಕಳಿಗೆ ಜನ್ಮ ವಿತ್ತದ್ದು ಮಹದಿಯಾದ ಖತೀಜ(ರ.ಅ) ರವರಾದರೆ ಇಬ್ರಾಹೀಂ (ರ.ಅ) ರವರಿಗೆ ಜನ್ಮ ನೀಡಿದ್ದು ದಾಸಿಯಾದ ಮರಿಯ್ಯತ್ತುಲ್ ಖಿಬ್ತ್ವಿಯ್ಯ (ರ.ಅ) ರವರಾಗಿದ್ದಾರೆ. ಅಬ್ದುಲ್ಲಾ(ರ.ಅ), ಇಬ್ರಾಹೀಂ(ರ.ಅ)ರವರು ಪ್ರವಾದಿತ್ವ ಲಭಿಸಿದ ನಂತರವಾಗಿತ್ತು ಜನಿಸಿದ್ದು. ಬಾಕಿಯಿರುವ ಮಕ್ಕಳು ಪ್ರವಾದಿತ್ವ ಲಭಿಸುವುದಕ್ಕಿಂತ ಮುಂಚೆ ಮಕ್ಕದಲ್ಲಿ ಜನಿಸಿದವರು. ಆದರೆ, ಅಬ್ದುಲ್ಲಾ(ರ.ಅ) ರವರು ಪ್ರವಾದಿತ್ವ ಲಭಿಸಿದ ನಂತರ ಮಕ್ಕಾದಲ್ಲೂ ಇಬ್ರಾಹೀಂ(ರ.ಅ) ರವರು ಹಿಜಿರ ನಂತರ ಮದೀನದಲ್ಲೂ ಜನಿಸಿದರು. ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ)ರವರ ಗಂಡು ಮಕ್ಕಳು ಸಣ್ಣ ಪ್ರಾಯದಲ್ಲೇ ಮರಣ ಹೊಂದಿದರು. ಅವರಲ್ಲಿ ಖಾಸಿಂ(ರ.ಅ)ರವರಾಗಿದ್ದರು ಪ್ರಥಮವಾಗಿ ಮರಣ ಹೊಂದಿದ್ದು.ನಂತರ ಅಬ್ದುಲ್ಲಾ(ರ.ಅ) ಹಾಗೂ ಇಬ್ರಾಹೀಂ(ರ.ಅ) ರವರು ವಫಾತಾದರು.

ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ಹೆಣ್ಣು ಮಕ್ಕಳೆಲ್ಲರೂ ವಿವಾಹಿತರೂ,ಸತ್ಯ ವಿಶ್ವಾಸಿಗಳೂ,ಪಲಾಯನ ಗೈದವರೂ ಆಗಿದ್ದರು. ಫಾತೀಮಾ ಬೀವಿ(ರ.ಅ)ಯೊಬ್ಬರನ್ನು ಬಿಟ್ಟು ಮತ್ತೆಲ್ಲರೂ ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ವಫಾತಿನ ಮುಂಚೆಯೆ ಇಹಲೋಕ ತ್ಯಜಿಸಲ್ಪಟ್ಟವರೂ, ಫಾತಿಮಾ ಬೀವಿ(ರ.ಅ) ರವರು ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ವಫತಿನ ಬಳಿಕ ಕೇವಲ ಆರು ತಿಂಗಳು ಮಾತ್ರವೇ ಜೀವಿಸಿದ್ದರು. ಸಾಧಾರಣವಾಗಿ ಗಂಡು

ಮಕ್ಕಳಿಂದಾಗಿದೆ ಪರಂಪರೆಯನ್ನು ನಿರ್ಣಯಿಸುವುದು ಆದರೆ ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ಗಂಡು ಮಕ್ಕಳಾದ ಖಾಸಿಂ(ರ.ಅ), ಅಬ್ದುಲ್ಲಾ(ರ.ಅ), ಇಬ್ರಾಹೀಂ(ರ.ಅ) ಎಂಬವರು ಸಣ್ಣ ಪ್ರಾಯದಲ್ಲೇ ಮರಣ ಹೊಂದಿದ ಕಾರಣದಿಂದಾಗಿ ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ವಿಶುದ್ದ ಪರಂಪರೆಯನ್ನು ಸಂರಕ್ಷಿಸಿದ್ದ ಪ್ರೀಯ, ಪುತ್ರಿ ಫಾತಿಮಾ ಬೀವಿ(ರ.ಅ)ರವರಿಂದಾಗಿತ್ತು.

*****

## (1)

## ಝೈನಬ (ರಳಿಯಲ್ಲಾಹು ಅನ್ಹಾ)

ಮದೀನಕ್ಕೆ ಪಲಾಯಣ ಗೈದ ಸಂದರ್ಭದಲ್ಲಿ ಶತ್ರುಗಳು ಝೈನಬ ರಳಿಯಲ್ಲಾಹು ಅನ್ಹಾ ರವರನ್ನು ಹಿಂಸಿಸಿದರು ಆಗ ನೆಬಿ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರು ಹೇಳಿದರು: ಝೈನಬ ನನ್ನ ಕಾರಣದಿಂದ ಕಷ್ಟ ಆನುಭವಿಸಿದಳು.

**ಹೆಸರು** : ಝೈನಬ(ರ.ಅ)

**ತಂದೆ** : ಮುಹಮ್ಮದ್ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ).

**ತಾಯಿ** : ಖತೀಜ(ರ.ಅ).

**ಜನನ** : ಹಿಜಿರದ 23 ವರ್ಷ ಮುಂಚೆ,ಮಕ್ಕದಲ್ಲಿ.

**ವಿವಾಹ** : ಮಕ್ಕದಲ್ಲಿ.

**ಪತಿ** :ರಬೀಅ್ ನ ಮಗ ಅಬುಲ್ ಅಸ್ವ್.

**ಕುಟುಂಬ** : 1.ಅಲೀ(ರ.ಅ),

(ಸಣ್ಣ ಪ್ರಾಯದಲ್ಲೇ ಮರಣ ಹೊಂದಿದರು),

2.ಉಮಾಮ

(ಇವರನ್ನು ಫಾತಿಮಾ ಬೀವಿ(ರ.ಅ) ರವರ ವಫಾತಿನ ಬಳಿಕ ಅಲೀ (ರ.ಅ) ರವರು ವಿವಾಹ ಗೈದರು. ಅಲೀ(ರ.ಅ) ರವರ ನಂತರ ನೌಫಲ್ ರವರ ಮಗ ಮುಗೀರ ವಿವಾಹ ಗೈದರು.)

**ಜೀವಿತಾವಧಿ** : 31 ವರ್ಷ.
**ಮರಣ** : ಹಿಜಿರ 8ನೇ ವರ್ಷ ಮದೀನದಲ್ಲಿ.

*****

## (2)
## ಖಾಸಿಂ (ರಳಿಯಲ್ಲಾಹು ಅನ್ಹು)

ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರಿಗೆ ಪ್ರಥಮವಾಗಿ ಜನಿಸಿದ ಮಗು ಖಾಸಿಂ ಹಾಗೂ ಪ್ರಥಮವಾಗಿ ವಫಾತಾದ ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ಮಗು ಖಾಸಿಂ ರಳಿಯಲ್ಲಾಹು ಅನ್ಹು ರವರಾಗಿರುವರು.

**ಹೆಸರು** : ಖಾಸಿಂ(ರ.ಅ)
**ತಂದೆ** : ಮುಹಮ್ಮದ್ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ)
**ತಾಯಿ** : ಖತೀಜ(ರ.ಅ).
**ಜನನ** : ಮಕ್ಕದಲ್ಲಿ.
**ಜೀವಿತಾವಧಿ** : ಕೆಲವು ತಿಂಗಳುಗಳು.
**ಮರಣ** : ಮಕ್ಕಾದಲ್ಲಿ.

******

## (3)
## ರುಖಿಯ್ಯ (ರಳಿಯಲ್ಲಾಹು ಅನ್ಹಾ)

**ಹೆಸರು** : ರುಖಿಯ್ಯ(ರ.ಅ)
**ತಂದೆ** : ಮುಹಮ್ಮದ್ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ).
**ತಾಯಿ** : ಖತೀಜ(ರ.ಅ).
**ಜನನ** : ಹಿಜಿರದ 22 ವರ್ಷ ಮುಂಚೆ ಮಕ್ಕದಲ್ಲಿ.
**ವಿವಾಹ** : ಮಕ್ಕದಲ್ಲಿ (ಎರಡು ಸಲ)

**ಪತಿಯಂದಿರು:** 1.ಅಬೂಲಹಬನ ಮಗ ಉತ್‌ಬತ್

(ಅಬೂ ಲಹಬನ್ನು ಆಕ್ಷೇಪಿಸಿ ಖುರ್‌ಆನ್‌ನಲ್ಲಿ ಸೂಕ್ತವು ಅವತರಿಸಿದ್ದರಿಂದ ಅವರು ಸಂಭೋಗಕ್ಕೆ ಏರ್ಪಡುವುದಕ್ಕೂ ಮುಂಚೆ ವೈವಾಹಿಕ ಬಂಧದಿಂದ ವಿಚ್ಛೇದಿಸಿದರು.ನಂತರ ಮಕ್ಕ ವಿಜಯದ ದಿವಸ ಅವರು ಮುಸ್ಲಿಂ ಆದರು.)

2.ಉಸ್ಮಾನ್ ಬಿನ್ ಅಫ್ವಾನ್ (ರ.ಅ)

**ಕುಟುಂಬಗಳು** : ಅಬ್ದುಲ್ಲಾ (ಸಣ್ಣ ಪ್ರಾಯದಲ್ಲೇ ವಫಾತದರು.)

**ಜೀವಿತಾವಧಿ** : 24 ವರ್ಷ.

**ಮರಣ** : ಹಿಜಿರ 2 ನೇ ವರ್ಷ, ಮದೀನದಲ್ಲಿ.

******

## (4)–

## ಉಮ್ಮು ಖುಲ್ಸೂಂ(ರಳಿಯಲ್ಲಾಹು ಅನ್ಹಾ)

**ಹೆಸರು** : ಉಮ್ಮು ಖುಲ್ಸೂಂ(ರ.ಅ)

**ತಂದೆ** : ಮುಹಮ್ಮದ್ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ)

**ತಾಯಿ** : ಖತೀಜ(ರ.ಅ)

**ಜನನ** : ಹಿಜಿರದ 19 ವರ್ಷ ಮುಂಚೆ ಮಕ್ಕದಲ್ಲಿ.

**ವಿವಾಹ** : 1.ಮಕ್ಕದಲ್ಲಿ,

2.ಹಿಜಿರ ಮೂರನೇ ವರ್ಷ ಮದೀನದಲ್ಲಿ.

**ಪತಿಯಂದಿರು** :1.ಅಬೂ ಲಹಬ್‌ನ ಮಗ ಉತೈಬ

( ಮುಶ್ರಿಕ್ ಆಗಿ ಮರಣ)

2.ಉಸ್ಮಾನ್ ಅಫ್ವಾನ್(ರ.ಅ)

(ರುಖಿಯ್ಯಾ (ರ.ಅ)ರವರ ಮರಣದ ಬಳಿಕ.)

**ಕುಟುಂಬ** : –ಇಲ್ಲ–

**ಜೀವಿತಾವಧಿ** : 28 ವರ್ಷ.

**ಮರಣ** : ಹಿಜಿರ 9,ಮದೀನದಲ್ಲಿ.

******

# (5)

# ಸ್ವರ್ಗಿಯ ಮಹಿಳಾ ನೇತಾರೆ

# ಫಾತಿಮ(ರಳಿಯಲ್ಲಾಹು ಅನ್ಹಾ)

ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಮ) ರವರ ಪರಂಪರೆ (ಅಹ್ಲ್ ಬೈತ್) ಫಾತಿಮಾ ಬೀವಿ(ರ.ಅ) ರವರ ಭಾಗದಿಂದಾಗಿದೆ. ತಿರು ನೆಬಿ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರಿಗೆ ತುಂಬಾ ಪ್ರೀಯಳಾದ ಮಗಳು ಫಾತಿಮಾ.ಫಾತಿಮಾ ನನ್ನ ಒಂದು ಭಾಗ ಎಂದು ನೆಬಿ (ಸ.ಅ)ರವರು ಹೇಳಿದ್ದಾಗಿ ಹಲವಾರು ವಚನಗಳು ಕಾಣಬಹುದು.ಫಾತಿಮ(ರ.ಅ) ವಫಾತಾಗುವವರೆಗೂ ಅಲೀ(ರ.ಅ) ಬೇರೆ ವಿವಾಹ ಗೈದಿರಲಿಲ್ಲ.

**ಹೆಸರು** :ಫಾತಿಮ(ರ.ಅ)

**ತಂದೆ** : ಮುಹಮ್ಮದ್(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ)

**ತಾಯಿ** :ಖತೀಜ(ರ.ಅ).

**ಜನನ** : ಹಿಜಿರದ 18 ವರ್ಷ ಮುಂಚೆ,ಮಕ್ಕದಲ್ಲಿ.

**ವಿವಾಹ** : ಹಿಜಿರ 2ನೇ ವರ್ಷ, ಮದೀನದಲ್ಲಿ.

**ಪತಿ** : ಅಲ್ಯೀಯ್ಯ್ ಬಿನ್ ಅಬೀ ತ್ವಾಲಿಬ್(ರ.ಅ).

**ಕುಟುಂಬ** : ಹಸನ್(ರ.ಅ)–ಹುಸೈನ್(ರ.ಅ) (ಸ್ವರ್ಗದಲ್ಲಿನ ಯುವ ನೇತಾರರು), ಮುಹ್ಸೀನ್ (ಸಣ್ಣ ಪ್ರಾಯದಲ್ಲೇ ಮರಣ ಹೊಂದಿದರು.), ಉಮ್ಮು ಖುಲ್ಸೂಂ,ಝೈನಬ.

**ಜೀವಿತಾವಧಿ** : 29 ವರ್ಷ.

**ಮರಣ** : ಹಿಜಿರ 11 ನೇ ವರ್ಷ ರಮಳಾನ್ 3 ಮದೀನದಲ್ಲಿ.

**ಮಖ್ಬರ** : ಜನ್ನತ್ತುಲ್ ಬಖೀಅ್.

*******

## (6)–

## ಅಬ್ದುಲ್ಲಾ(ರಳಿಯಲ್ಲಾಹು ಅನ್ಹು)

**ಹೆಸರು** : ಅಬ್ದುಲ್ಲಾ(ರ.ಅ).

**ತಂದೆ** : ಮುಹಮ್ಮದ್(ಸ್ವಲ್ಲಲ್ಲಾಹು ಅಲೈಹಿವಸಲ್ಲಂ).

**ತಾಯಿ** : ಖತೀಜ(ರ.ಅ).

**ಜನನ** : ಮಕ್ಕದಲ್ಲಿ
ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ)ರವರಿಗೆ
ಪ್ರವಾದಿತ್ವ ಲಭಿಸುವುದಕ್ಕಿಂತ ಮುಂಚೆ.)

**ಜೀವಿತಾವಧಿ** : ಕೆಲವು ತಿಂಗಳು.

**ಮರಣ** : ಮಕ್ಕದಲ್ಲಿ.

******

## (7)

## ಇಬ್ರಾಹೀಂ(ರಳಿಯಲ್ಲಾಹು ಅನ್ಹು)

**ಹೆಸರು** : ಇಬ್ರಾಹೀಂ (ರ.ಅ).

**ತಂದೆ** : ಮುಹಮ್ಮದ್ (ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ).

**ತಾಯಿ** :ಮಾರಿಯ್ಯತ್ತುಲ್ ಖೀಬ್ತ್ವಿಯ್ಯಾ(ರ.ಅ)

**ಜನನ** : ಹಿಜಿರ 8,ಮದೀನದಲ್ಲಿ.

**ಹಾಲುಣಿಸಿದ್ದು** : ಉಮ್ಮು ಸೈಫ್.

**ಮರಣ** : ಹಿಜಿರ 10 ನೇ ವರ್ಷ,ಮದೀನದಲ್ಲಿ.

**ಜೀವಿತಾವಧಿ** : ಮೂರು ವರ್ಷ.

**ಮಖ್‌ಬರ** : ಜನ್ನತ್ತುಲ್ ಬಖೀಅ್
( ಉಸ್ಮಾನ್ ಬಿನ್ ಮಳ್‌ಊನಿನ
ಖಬರಿನ ಸಮೀಪ.)

******

# ನೆಬಿ(ಸ್ವಲ್ಲಲ್ಲಾಹು ಅಲೈಹಿ ವಸಲ್ಲಂ) ರವರ ಸುಪುತ್ರರು

## (1)

## ಹಸನ್(ರಳಿಯಲ್ಲಾಹು ಅನ್ಹು)

ಹಸನ್ ಎಂದು ನೆಬಿ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರು ನಾಮಕರಣ ಮಾಡಿದರು. ಮಾತ್ರವಲ್ಲ ಕಾಣಲು ನೆಬಿ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರವರ ದೇಹ ಪ್ರಕೃತಿಯನ್ನು ಹೊಂದಿದ್ದರು.ತಲೆಯಿಂದ ಎದೆಯವರೆಗಾಗಿತ್ತು ತಿರು ನೆಬಿ(ಸ.ಅ) ರವರಿಂದಿರುವ ಇವರ ಸದೃಶ.

**ಹೆಸರು** : ಹಸನ್(ರ.ಅ).

**ತಂದೆ** : ಅಲ್ಯೀಯ್ಯ್ ಬಿನ್ ಅಬೀ ತ್ವಾಲಿಬ್ (ರ.ಅ)

**ತಾಯಿ** : ಫಾತಿಮತು ಝುಹ್ರ(ರ.ಅ).

**ಜನನ** : ಹಿಜಿರ 3 ನೇ ವರ್ಷ ರಮಳಾನ್ 15, ಮದೀನದಲ್ಲಿ.

**ಪತ್ನಿಯಂದಿರು** :ಏಳುವತ್ತು ಮಡದಿಯಂದಿರು ಇದ್ದರು. (ಆದರೆ,ಒಂದೇ ಸಮಯ ನಾಲ್ಕಕ್ಕಿಂತಲೂ ಅಧಿಕ ಮಡದಿಯರನ್ನು ಹೊಂದಿರಲಿಲ್ಲ.)

**ಕುಟುಂಬ** : ಝೈದ್,
ಅಲ್ ಹಸನ್,
ಅಲ್ ಖಾಸಿಂ, ಅಬೂಬಕ್ಕರ್,
ಅಬ್ದುಲ್ಲ್ ಅಮ್ರ್, ಅಬ್ದುರ್ರಹ್ಮಾನ್.

**ಜೀವಿತಾವಧಿ** : 45/46 ವರ್ಷ.

**ಮರಣ** : ಹಿಜಿರ 49,ಮದೀನದಲ್ಲಿ.

**ಮಖ್ಬರ** : ಜನ್ನತ್ತುಲ್ ಬಖೀಅ್.

******

# (2)
# ಹುಸೈನ್(ರಳಿಯಲ್ಲಾಹು ಅನ್ಹು)

ಹುಸೈನ್ ಎಂದು ನಾಮಕರಣ ಗೈದದ್ದೂ ನೆಬಿ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರು ಆಗಿದ್ದಾರೆ. ತಿರು ನೆಬಿ ಹೇಳಿದರು: "ಸ್ವರ್ಗವಕಾಶಿಗಳನ್ನು ಕಾಣಲು ನೀವು ಇಚ್ಛಿಸುವುದಾದರೆ ನೀವು ಹುಸೈನ್ ರಳಿಯಲ್ಲಾಹು ಅನ್ಹು ರವನ್ನು ನೋಡಿರಿ"..ನೆಬಿ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರು ರವರೊಂದಿನ ಮುಖ ಛಾಯೆ ಹಗೂ ಶರೀರ ಛಾಯೆ ಹೊಂದಿದವರಾಗಿದ್ದಾರೆ ಹುಸೈನ್ ರಳಿಯಲ್ಲಾಹು ಅನ್ಹು ರವರು.

| | |
|---|---|
| **ಹೆಸರು** | : ಹುಸೈನ್(ರ.ಅ). |
| **ತಂದೆ** | :ಅಲ್ಯೀಯ್ಯ್ ಬಿನ್ ಅಬೀ ತ್ವಾಲಿಬ್(ರ.ಅ). |
| **ತಾಯಿ** | :ಫಾತಿಮತು ಝುಹ್ರ(ರ.ಅ) |
| **ಜನನ** | : ಹಿಜಿರ 4ನೇ ವರ್ಷ,ಶಅ್ಬಾನ್ 5. |
| **ಪತ್ನಿಯಂದಿರು** | : ಇಂರುಲ್ ಖೈಸ್ ರ ಮಗಳು ರುಬಾಬ್. |
| **ಕುಟುಂಬ** | : ಅಲಿ ಅಕ್ಬರ್, ಅಬೂಬಕ್ಕರ್, ಅಲೀ ಝೈನುಲ್ ಅಬಿದೀನ್, ಅಲೀ ಅಸ್ಕರ್, ಉಮರ್, ಅಬ್ದುಲ್ಲಾ, ಮುಹಮ್ಮದ್ ಜಲ್ಫರ್. |
| **ಜೀವಿತಾವಧಿ** | ; 55 ವರ್ಷ. |
| **ಮರಣ** | : ಹಿಜಿರ 61 ನೇ ವರ್ಷ, ಕೂಫಾ ಬಳಿಯಿರುವ ಕರ್ಬಲದಲ್ಲಿ. |
| **ಮಖ್ಬರ** | : ಕರ್ಬಾಲ. |

*********